KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜುಲೈ ೨೩, ೨೦೦೯ (ಶ್ರಾವಣ ೧, ಶಕ ವರ್ಷ ೧೯೩೧) | ಸಂಚಿಕೆ ೩೦ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ

**ಅಧಿಸೂಚನೆ**

**ಸಂಖ್ಯೆ: ಎ3–ಸಿಓಎನ್–ಸಿಆರ್–7/2009–10, ದಿನಾಂಕ:22ನೇ ಜೂನ್, 2009**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಅರಣ್ಯ ಅಪರಾಧ ಪ್ರಕರಣ ಸಂಬಂಧ ಕೆಳಕಂಡ ವಾಹನಗಳನ್ನು ವಲಯ ಅರಣ್ಯಾಧಿಕಾರಿ, ತರೀಕೆರೆ ವಲಯದ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್–71(ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ.

| ಕ್ರ. ಸಂ. | ಮೊಕದ್ದಮೆ ಸಂಖ್ಯೆ | ವಾಹನಗಳ ವಿವರ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | ವಲಯ ಅರಣ್ಯಾಧಿಕಾರಿ, ತರೀಕೆರೆ ಅರಣ್ಯ ಮೊಕದ್ದಮೆ ನಂ.32/2009–10, ದಿನಾಂಕ:14.06.2009. | 407 ವ್ಯಾನ್ ಸಂಖ್ಯೆ: ಕೆಎ–18–3440 ಹಾಗೂ ಬೀಟೆ 3=0.343 ಎಂ3 ಮತ್ತು ಬಿಲ್ವಾರ 5=0.652 ಎಂ3 | 497ST21CUQ726604 | 809811 |

ಈ ಮೇಲ್ಕಂಡ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಈ ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದಕ್ಕಾಗಿ ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ಈ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಟಿ. ಹೀರಾಲಾಲ್**

ಪಿ.ಆರ್.567

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

**ಆರ್ಥಿಕ ಇಲಾಖೆ**

**ಅಧಿಕೃತ ಜ್ಞಾಪನ**

**ಸಂಖ್ಯೆ:ಆಇ 15 ಸಉಲಾ 2009, ಬೆಂಗಳೂರು, ದಿನಾಂಕ:24ನೇ ಜೂನ್, 2009**

**ವಿಷಯ:** ದಿನಾಂಕ:01.01.2009ರಲ್ಲಿದ್ದಂತೆ ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯಲ್ಲಿನ ಸಹಾಯಕ ನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ ಪ್ರಚುರಪಡಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಕೃತ ಜ್ಞಾಪನ ಪತ್ರಸಂಖ್ಯೆ: ಆಇ 40 ಸಉಲಾ 2008, ದಿನಾಂಕ:22.08.2008.

2) ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ: ಸಉಸಿ(3)90/2008–09, ದಿನಾಂಕ:11.02.2009.

ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯಲ್ಲಿನ ದಿನಾಂಕ:01.01.2009ರಲ್ಲಿದ್ದಂತೆ ಸಹಾಯಕ ನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

| ಕ್ರ. ಸಂ. | ಅಧಿಕಾರಿಗಳ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|
| 1. | ಜಿ.ಎಂ. ಶೆಡೋಳೆ | 25.09.1952 | 25.11.1977 | 11.12.1988 | 11.12.1988 |
| 2. | ಪಿ.ದೇವೇಂದ್ರಸ್ವಾಮಿ | 08.09.1951 | 05.11.1981 | 01.04.1990 | 01.04.1990 |
| 3. | ಸಿ. ಕೃಷ್ಣಪ್ಪ | 09.06.1955 | 01.10.1981 | 01.04.1990 | 01.04.1990 |
| 4. | ಹೆಚ್. ರುದ್ರಪ್ಪ | 01.06.1954 | 27.03.1984 | 01.06.1992 | 01.06.1992 |
| 5. | ಟಿ. ಪುಟ್ಟಸ್ವಾಮಿ | 01.05.1954 | 01.12.1983 | 28.05.1992 | 28.05.1992 |
| 6. | ಮಹದೇವ ಮಡಿವಾಳ | 01.04.1953 | 11.07.1985 | 17.11.1992 | 16.11.1992 |
| 7. | ಎಲ್. ರಂಗಯ್ಯ | 29.09.1962 | 02.09.1985 | 11.07.1993 | 11.07.1993 |
| 8. | ಶಂಕರ್ ಭೀ. ನಾಯಕವಾಡಿ | 20.05.1958 | 30.03.1984 | 04.08.1995 | 04.08.1995 |
| 9. | ಶಿವಾನಂದ | 18.05.1955 | 03.04.1984 | 04.08.1995 | 04.08.1995 |
| 10. | ಕೆ. ಸಿದ್ದಪ್ಪ | 07.10.1956 | 26.03.1984 | 04.12.1995 | 04.12.1995 |
| 11. | ಎಂ.ಕೆ. ಹೆಗಡೆ | 14.06.1959 | 03.04.1984 | 04.12.1995 | 04.12.1995 |
| 12. | ಎಂ.ಬಿ. ಸಿದ್ದರಾಜು | 08.05.1952 | 30.09.1985 | 20.12.1995 | 04.12.1995 |
| 13. | ಎಸ್.ಆರ್. ದುಂಡಗಿ | 20.07.1961 | 30.03.1984 | 03.08.2001 | 02.08.2001 |
| 14. | ಎಸ್. ಶ್ರೀನಿವಾಸಯ್ಯ | 10.04.1954 | 04.04.1984 | 02.08.2001 | 02.08.2001 |
| 15. | ಕೆ. ಸುಲೋಚನ | 12.07.1957 | 29.03.1984 | 03.08.2001 | 02.08.2001 |
| 16. | ಎಂ.ಎಸ್. ಪಾಟೀಲ್ | 20.07.1956 | 26.03.1984 | 03.08.2001 | 02.08.2001 |
| 17. | ವಿ. ಕಲಾವತಿ | 22.10.1964 | 02.09.1985 | 04.08.2001 | 02.08.2001 |
| 18. | ಎಂ.ಎ. ಮೂಡಲಗಿ | 01.06.1960 | 04.09.1985 | 03.08.2001 | 02.08.2001 |
| 19. | ಕೆ.ಆರ್. ನಾಗೇಂದ್ರರಾವ್ | 28.04.1960 | 09.09.1985 | 09.08.2001 | 02.08.2001 |
| 20. | ಚಂದ್ರೇಗೌಡ | 18.07.1961 | 04.09.1985 | 03.08.2001 | 02.08.2001 |
| 21. | ಸಿ. ಪುಟ್ಟರಾಜು | 25.06.1960 | 25.09.1985 | 03.08.2001 | 02.08.2001 |
| 22. | ಬಿ. ಜಯಪ್ಪ | 03.06.1962 | 24.11.1988 | 03.08.2001 | 02.08.2001 |
| 23. | ಬಿ.ಜಿ. ಮಲ್ಲೇದೇವರು | 08.06.1954 | 05.09.1985 | 20.09.2001 | 13.09.2001 |
| 24. | ಜರೀನಾ ಎಂ. ಶೇಖ್ | 28.05.1954 | 06.09.1985 | 20.09.2001 | 13.09.2001 |
| 25. | ನಾಡಗಿರಿ ಶಂಕರ್ ಆರ್. | 19.07.1961 | 25.11.1988 | 18.09.2001 | 13.09.2001 |
| 26. | ಪಿ. ಲಿಂಗಪ್ಪ | 25.12.1954 | 02.09.1985 | 15.10.2004 | 03.09.2004 |
| 27. | ರಾಜಶೇಖರಯ್ಯ | 01.06.1960 | 03.09.1985 | 13.12.2007 | 01.12.2007 |
| 28. | ಜಿ.ಕೆ. ಗೌಡರ್ | 01.03.1960 | 10.09.1985 | 13.12.2007 | 01.12.2007 |

| ಕ್ರ. ಸಂ. | ಅಧಿಕಾರಿಗಳ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|
| 29. | ಮಹಮದ್ ಹುಸೇನ್ | 20.08.1959 | 03.07.1985 | 19.12.2007 | 01.12.2007 |
| 30. | ಡಿ. ನಾರಾಯಣಸ್ವಾಮಿ | 25.07.1962 | 26.11.1988 | 12.12.2007 | 01.12.2007 |

ಈ ಜೇಷ್ಠತಾ ಪಟ್ಟಿಯ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದರೆ ಅಂತಹ ಅಧಿಕಾರಿಗಳು ಈ ಅಧಿಕೃತ ಜ್ಞಾಪನ ಹೊರಡಿಸಿದ ದಿನಾಂಕದಿಂದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆಗಳನ್ನು ಇಲಾಖಾ ನಿರ್ದೇಶಕರ ಮುಖಾಂತರ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು, ಈ ಅವಧಿಯೊಳಗೆ ಬರುವ ಆಕ್ಷೇಪಣೆಗಳನ್ನು ಪರಿಗಣಿಸಿ ಈ ಜೇಷ್ಠತಾ ಪಟ್ಟಿಯನ್ನು ಅಂತಿಮಗೊಳಿಸಿ ಪ್ರಕಟಿಸಲು ಕ್ರಮ ತೆಗೆದುಕೊಳ್ಳಲಾಗುವುದು.

**ಎನ್. ಶ್ರೀನಿವಾಸ ಮೂರ್ತಿ**

ಪಿ.ಆರ್.570 ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ನಡವಳಿಕೆಗಳು**

**ನಂ.ಡಿಆರ್‌ಟಿ/ಡಿಎಲ್‌ಎಸ್/355/ಸಿಆರ್-112/2000-01, ದಿನಾಂಕ:25ನೇ ಮಾರ್ಚ್, 2009**

**ವಿಷಯ:** ಸಮಾಪನೆಗೊಂಡಿರುವ ರೇಷ್ಮೆ ಬೆಳೆಗಾರರ ಹರಿಜನ ರೈತರ ನೀರಾವರಿ ಬಾವಿ ಸಹಕಾರ ಸಂಘ ನಿಯಮಿತ, ಗುನ್ನಾಗರ ಕುಣಿಗಲ್ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಸಂಖ್ಯೆ ಆದೇಶ ದಿನಾಂಕ:24.03.2001.

2) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ:21.11.2001.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಪ್ರಸ್ತಾವನೆ ಪತ್ರಸಂಖ್ಯೆ: ಸನಿ32/ಡಿಎಲ್‌ಎಸ್/309/2005-06 ದಿನಾಂಕ:24.02.2009.

**ಪ್ರಸ್ತಾವನೆ:**

ರೇಷ್ಮೆ ಬೆಳೆಗಾರರ ಹರಿಜನ ರೈತರ ನೀರಾವರಿ ಬಾವಿ ಸಹಕಾರ ಸಂಘ ನಿಯಮಿತ, ಗುನ್ನಾಗರ, ಕುಣಿಗಲ್ ತಾಲ್ಲೂಕು ಈ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿದ್ದು ಉಲ್ಲೇಖಿತ (1)ರ ಈ ಕಛೇರಿ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಕುಣಿಗಲ್ ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಲಾಗಿತ್ತು.

ಉಲ್ಲೇಖ (3)ರ ಪತ್ರದೊಂದಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರು ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವನೆ ಸಲ್ಲಿಸಿ ಸಂಘದ ನೊಂದಣಿಯನ್ನು ರದ್ದುಪಡಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸಮಾಪನಾಧಿಕಾರಿಗಳ ಸಭಾ ನಡವಳಿಕೆ ದಿನಾಂಕ:01.07.2006ರ ಆಸ್ತಿ ವಿಭಾಗದ ವಿಷಯ ಸಂಖ್ಯೆ (1)ರ ನಿರ್ಣಯದಲ್ಲಿ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕಿನ ಉಳಿತಾಯ ಖಾತೆಯಲ್ಲಿದ್ದ ರೂ.5,272-20 ಗಳನ್ನು ಡ್ರಾ ಮಾಡಿ, ಸಹಕಾರ ಅಭಿವೃದ್ಧಿ ನಿಧಿಗೆ ರೂ.2,471-20 ನ್ನು ಪಾವತಿಸಲು ತೀರ್ಮಾನಿಸಿ ಪಾವತಿಸಿರುವ ಚಲನ್ ಸಲ್ಲಿಸಿರುತ್ತಾರೆ. ಸಮಾಪನಾಧಿಕಾರಿಯ ನಿರ್ವಹಣಾ ವೆಚ್ಚ ಹಾಗೂ ಸಂಭಾವನೆಯಾಗಿ ಒಟ್ಟು ರೂ.2,801-00 ಭರಿಸಿರುತ್ತಾರೆ.

ಸಂಘದಲ್ಲಿ ವಸೂಲಿಯಾಗುವಂತಹ ಇತರೆ ಯಾವುದೇ ಆಸ್ತಿಗಳು ಇಲ್ಲದ ಕಾರಣ ಅವುಗಳನ್ನು ನಷ್ಟದ ಖಾತೆಗೆ ವರ್ಗಾಯಿಸಿರುತ್ತಾರೆ. ಜವಾಬ್ದಾರಿಗಳನ್ನು ವಿಲೇವಾರಿ ಮಾಡಲು ಸಂಘದಲ್ಲಿ ಯಾವುದೇ ರಹ ಇಲ್ಲದ ಕಾರಣ ಆಸ್ತಿ ಜವಾಬ್ದಾರಿಗಳನ್ನು ಶೂನ್ಯ ಮಾಡಿ ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವನೆ ಸಲ್ಲಿಸಲು ತೀರ್ಮಾನಿಸಿರುತ್ತಾರೆ.

ಮೇಲ್ಕಂಡ ಅಂಶಗಳನ್ನು ಪರಿಗಣಿಸಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ನಮೂದಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ಹಾಗೂ ಉಲ್ಲೇಖ (2)ರ ಸರ್ಕಾರದ ಅಧಿಸೂಚನೆಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಡಿ. ಪಾಂಡುರಂಗಪ್ಪ, ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಸಮಾಪನೆಗೊಂಡಿರುವ ರೇಷ್ಮೆ ಬೆಳೆಗಾರರ ಹರಿಜನ ರೈತರ ನೀರಾವರಿ ಬಾವಿ ಸಹಕಾರ ಸಂಘ ನಿಯಮಿತ, ಗುನ್ನಾಗರ, ಕುಣಿಗಲ್ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ: ಎಆರ್‌ಟಿ/ಸಿ-1/ಎಂಕೆಟಿ/7990/80-81 ದಿನಾಂಕ:13.03.1981ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ. ಇಂದಿನಿಂದ ಸಂಘವು ಅಸ್ತಿತ್ವದಲ್ಲಿರುವುದಿಲ್ಲ ಮತ್ತು ವಿಸರ್ಜಿತವಾಗಿರುತ್ತದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ:25.03.2009 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಉಪನಿಬಂಧಕರು,

ಪಿ.ಆರ್.331 ತುಮಕೂರು ಜಿಲ್ಲೆ, ತುಮಕೂರು.

## ಕರ್ನಾಟಕ ಅರಣ್ಯ ಇಲಾಖೆ

## ಉಪಅರಣ್ಯ ಸಂರಕ್ಷಣಾಧಿಕಾರಿಗಳು, ಹುಣಸೂರು ವನ್ಯಜೀವಿ ವಿಭಾಗ, ಹುಣಸೂರುರವರ ಕಛೇರಿ ಆದೇಶದ ಉದ್ಧರಣ

## ಕಛೇರಿ ಆದೇಶ ಸಂಖ್ಯೆ:150/2008–09, ದಿನಾಂಕ:23/26ನೇ ಮಾರ್ಚ್, 2009

**ವಿಷಯ:** ಶ್ರೀ ಜೆ.ಕೆ. ಮುತ್ರಾಮ ಆನೆಕಾವಾಡಿ ಕಲ್ಲಹಳ್ಳ ವನ್ಯಜೀವಿ ವಲಯ ರವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ಬಗ್ಗೆ.

**ಉಲ್ಲೇಖ:**1) ವಲಯ ಅರಣ್ಯಾಧಿಕಾರಿಗಳು, ವನ್ಯಜೀವಿ ವಲಯ, ಕಲ್ಲಹಳ್ಳ ಇವರ ಪತ್ರ ಸಂಖ್ಯೆ:122/04–05, ದಿನಾಂಕ:24.07.2004.

2) ಈ ಕಛೇರಿಯಿಂದ ನೀಡಿದ ಕಾರಣ ಕೇಳಿ ಸೂಚನಾ ಪತ್ರಸಂಖ್ಯೆ: ಎ2: ಸಿಬ್ಬಂದಿ:ಜಿಎಲ್:821/04–05, ದಿನಾಂಕ:22.09.2006.

3) ಈ ಕಛೇರಿಯಿಂದ ನೀಡಿದ ಅಂತಿಮ ನೋಟೀಸ್ ದಿನಾಂಕ:04.12.2006.

4) ದಿನಾಂಕ:19.02.2007ರಲ್ಲಿ ಮೈಸೂರು ಮಿತ್ರ ದಿನಪತ್ರಿಕೆಯಲ್ಲಿ ಪ್ರಕಟಣೆ.

5) ದಿನಾಂಕ:19.02.2007ರಲ್ಲಿ ಕನ್ನಡಪ್ರಭ ದಿನಪತ್ರಿಕೆ ಪ್ರಕಟಣೆ.

6) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ರವರ ಪತ್ರ ಸಂಖ್ಯೆ:ಬಿ3: ಸಿಬ್ಬಂದಿ: ಸಿಆರ್.65/07–08, ದಿನಾಂಕ:24.08.2007.

7) ಈ ಕಛೇರಿಯಿಂದ ನೀಡಿದ ದೋಷಾರೋಪಣಪಟ್ಟಿ ಸಂಖ್ಯೆ: ಎ2:ಸಿಬ್ಬಂದಿ:ಜಿಎಲ್.821/04–05, ದಿನಾಂಕ:05.11.2007.

8) ಈ ಕಛೇರಿ ಅಧಿಕೃತಜ್ಞಾಪನಪತ್ರ ಸಂಖ್ಯೆ:ಎ2:ಸಿಬ್ಬಂದಿ:ಜಿಎಲ್.821/04–05, ದಿನಾಂಕ:22.01.2008.

9) ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಹಾಗೂ ವಿಚಾರಣಾಧಿಕಾರಿಗಳು ನಾಗರಹೊಳೆ ಇವರ ವಿಚಾರಣಾ ವರದಿ ಪತ್ರಸಂಖ್ಯೆ: ಸಅಸಂ:ನಾಹೊ:ವಜಿ:ಇವಿ/08–09, ದಿನಾಂಕ:12.03.2009.

**ಪ್ರಸ್ತಾವನೆ:**

ಶ್ರೀ ಜೆ.ಕೆ. ಮುತ್ರಾಮ, ಆನೆಕಾವಾಡಿ, ಕಲ್ಲಹಳ್ಳ ವನ್ಯಜೀವಿ ವಲಯ ಇವರು ಅನುಕಂಪದ ಆಧಾರದ ಮೇಲೆ ದಿನಾಂಕ;28.01.2004ರಂದು ಸರ್ಕಾರಿ ಕರ್ತವ್ಯಕ್ಕೆ ನೇಮಕಗೊಂಡಿದ್ದು, ಸದರಿಯವರು ದಿನಾಂಕ:03.07.2004 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿದ್ದು, ಈ ಬಗ್ಗೆ ಉಲ್ಲೇಖ (1)ರಲ್ಲಿ ವಲಯ ಅರಣ್ಯಾಧಿಕಾರಿಗಳು ವರದಿ ಮಾಡಿರುತ್ತಾರೆ.

ಶ್ರೀ ಜೆ.ಕೆ. ಮುತ್ರಾಮ, ಆನೆಕಾವಾಡಿ ಇವರಿಗೆ ದಿನಾಂಕ:22.08.2004 ರಂದು ಕಾರಣ ಕೇಳಿಕೆ ನೋಟಿಸ್ ಜಾರಿ ಮಾಡಿ 7 ದಿನದ ಒಳಗಾಗಿ ಲಿಖಿತ ಹೇಳಿಕೆ ಅಥವಾ ಸರ್ಕಾರಿ ಕರ್ತವ್ಯಕ್ಕೆ ಗೈರುಹಾಜರಾದ ಕಾರಣಗಳನ್ನು ವಿವರಗಳೊಂದಿಗೆ ವರದಿ ಮಾಡುವಂತೆ ಸೂಚಿಸಿ ಸ್ವೀಕೃತಿ ಪಡೆಯಲಾಗಿತ್ತು. ವಲಯ ಅರಣ್ಯಾಧಿಕಾರಿಗಳು ಕಲ್ಲಹಳ್ಳ ವನ್ಯಜೀವಿ ವಲಯ ಇವರು ದಿನಾಂಕ:27.09.2004 ರಲ್ಲಿ ಈ ಕಛೇರಿಗೆ ವರದಿ ಮಾಡಿ ಶ್ರೀ ಜೆ.ಕೆ. ಮುತ್ರಾಮ, ಆನೆಕಾವಾಡಿ ಇವರು ದಿನಾಂಕ:03.07.2004 ರಿಂದ 09.09.2004 ರವರೆಗೆ ಅನಧಿಕೃತ ಗೈರುಹಾಜರಿ ಇದ್ದು ನೋಟಿಸ್ ನೀಡಿದ ಪ್ರಯುಕ್ತ ನೌಕರರು ದಿನಾಂಕ:10.09.2004 ರಂದು ಕರ್ತವ್ಯಕ್ಕೆ ಹಾಜರಿರುತ್ತಾರೆ ಎಂಬುದಾಗಿ ವರದಿ ನೀಡಿರುತ್ತಾರೆ. ನಂತರ ನೌಕರರು ದಿನಾಂಕ:05.01.2006 ರವರೆಗೆ ಕರ್ತವ್ಯ ನಿರ್ವಹಿಸಿ, ಮೇಲಾಧಿಕಾರಿಗಳ ಅನುಮತಿ ಹಾಗೂ ಯಾವುದೇ ರಜೆ ಅರ್ಜಿ ಸಲ್ಲಿಸದೆ ಸರ್ಕಾರಿ ಕರ್ತವ್ಯಕ್ಕೆ ಗೈರುಹಾಜರಿ ಆಗಿರುತ್ತಾರೆ ಎಂದು ವಲಯ ಅರಣ್ಯಾಧಿಕಾರಿ, ವನ್ಯಜೀವಿ ವಲಯ ಕಲ್ಲಹಳ್ಳ ಇವರು ನೀಡಿದ ವರದಿಯನ್ವಯ ಈ ಕಛೇರಿಯಿಂದ ನೌಕರರಿಗೆ ದಿನಾಂಕ:22.09.2009 ರಂದು ಕಾರಣ ಕೇಳಿ ನೋಟಿಸ್ ಜಾರಿ ಮಾಡಲಾಗಿದ್ದು ನೌಕರರು ಸದರಿ ನೋಟಿಸನ್ನು ಖುದ್ದು ದಿನಾಂಕ:06.10.2006ರಂದು ಸ್ವೀಕರಿಸಿ, ಸ್ವೀಕೃತಿ ನೀಡಿ, ಯಾವುದೇ ಲಿಖಿತ ಹೇಳಿಕೆ ನೀಡದೆ ಇದು, ದಿನಾಂಕ:10.10.2006 ರಂದು ಪುನಃ ಕರ್ತವ್ಯಕ್ಕೆ ಹಾಜರಾಗಿದ್ದು, ನೌಕರರು ಗೈರು ಹಾಜರಿಯಾಗಿರುವುದಕ್ಕೆ ಕೇಳಲಾದ ಕಾರಣ ಕೇಳಿ ನೋಟಿಸ್‌ಗೆ ಯಾವುದೇ ಉತ್ತರ ನೀಡದೆ ಇರುವ ಬಗ್ಗೆ ನೌಕರರಿಂದ ಲಿಖಿತ ಸಮಜಾಯಿಸಿ ಪಡೆದು ಸಲ್ಲಿಸುವಂತೆ ವಲಯ ಅರಣ್ಯಾಧಿಕಾರಿಗಳು, ಕಲ್ಲಹಳ್ಳ ವನ್ಯಜೀವಿ ವಲಯ ಇವರಿಗೆ ದಿನಾಂಕ:15.11.2006ರಂದು ಸೂಚಿಸಲಾಗಿತ್ತು.

ವಲಯ ಅರಣ್ಯಾಧಿಕಾರಿ, ವನ್ಯಜೀವಿ ವಲಯ ಕಲ್ಲಹಳ್ಳ ಇವರು ದಿನಾಂಕ:26.11.2006 ರಂದು ಈ ಕಛೇರಿಗೆ ವರದಿ ಮಾಡಿ ನೌಕರರು ದಿನಾಂಕ:10.10.2006 ರಂದು ಕರ್ತವ್ಯಕ್ಕೆ ಹಾಜರಾಗಿ ದಿನಾಂಕ:01.11.2006 ರವರೆಗೆ ಆನೆಶಿಬಿರದಲ್ಲಿ ಕರ್ತವ್ಯ ನಿರ್ವಹಿಸಿ ದಿನಾಂಕ:02.11.2006 ರಿಂದ ಪುನಃ ಕರ್ತವ್ಯಕ್ಕೆ ಗೈರುಹಾಜರಿಯಾಗಿರುತ್ತಾರೆ ಎಂದು ವರದಿ ಮಾಡಿ ಸದರಿ ನೌಕರರ ವಿರುದ್ಧ ಶಿಸ್ತುಕ್ರಮ ಕೈಗೊಳ್ಳುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ನೌಕರರು ಸರ್ಕಾರಿ ಕರ್ತವ್ಯಕ್ಕೆ ಪದೇ ಪದೇ ಗೈರು ಹಾಜರಾಗಿ ಮೇಲಾಧಿಕಾರಿಗಳಿಂದ ಅನುಮತಿ ಪಡೆಯದೆ ಕೇಂದ್ರಸ್ಥಾನ ಬಿಡುವುದು ಹಾಗೂ ಕಛೇರಿಯಿಂದ ನೀಡಿದ ಕಾರಣ ಕೇಳಿ ನೋಟಿಸ್‌ಗೆ ಉತ್ತರ ನೀಡದೆ ನಿರ್ಲಕ್ಷತನ ತೋರಿದ ಪ್ರಯುಕ್ತ ಈ ಕಛೇರಿಯಿಂದ ಉಲ್ಲೇಖ (3)ರಲ್ಲಿ ದಿನಾಂಕ:04.12.2006ರಲ್ಲಿ ಅಂತಿಮವಾಗಿ ನೋಟಿಸ್ ಜಾರಿ ಮಾಡಿ 3

ವರ್ಷದ ಸೇವಾ ಅವಧಿಯಲ್ಲಿ ಒಂದು ವರ್ಷಗಳ ಹೆಚ್ಚಿನ ಅವಧಿ ಸರ್ಕಾರಿ ಕರ್ತವ್ಯದಲ್ಲಿ ಅನಧಿಕೃತ ಗೈರು ಹಾಜರಿ ಇರುವುದು ಕಾನೂನು ಬಾಹಿರವಾಗಿದ್ದು, ಪದೇ ಪದೇ ಸರ್ಕಾರಿ ಕರ್ತವ್ಯಕ್ಕೆ ಗೈರು ಹಾಜರಿ ಆಗಿರುವುದನ್ನು ಪರಿಶೀಲಿಸಿದಲ್ಲಿ ಸರ್ಕಾರಿ ಸೇವೆಯಲ್ಲಿ ಆಸಕ್ತಿ ಇಲ್ಲವೆಂದು ಸ್ಪಷ್ಟವಾಗಿ ತಿಳಿಯಬಹುದಾಗಿದ್ದು, ಕೆ.ಸಿ.ಎಸ್.ಆರ್. ನಿಯಮ–108ರ ಪ್ರಕಾರ ಸೇವೆಯಿಂದ ವಜಾಗೊಳಿಸಲು ಕ್ರಮಕೈಗೊಳ್ಳಲಾಗುವುದು ಎಂದು ಸೂಚಿಸಲಾಗಿತ್ತು.

ವಲಯ ಅರಣ್ಯಾಧಿಕಾರಿ, ವನ್ಯಜೀವಿ ವಲಯ, ಕಲ್ಲಹಳ್ಳ ಇವರು ಈ ಕಛೇರಿಗೆ ದಿನಾಂಕ:02.01.2007 ರಂದು ವರದಿ ಮಾಡಿ ಶ್ರೀ ಜೆ.ಕೆ. ಮುತ್ರಾಮ ಬಿನ್ ಲೇ॥ ಜೆ.ಕೆ.ಕುಳ್ಳ, ಆನೆಕವಾಡಿ, ಇವರು ದಿನಾಂಕ:02.11.2006 ರಿಂದ ಸರ್ಕಾರಿ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿ ಆಗಿದ್ದು, ಈವರೆಗೆ ನೀಡಿದ ನೋಟಿಸ್‌ಗೆ ಯಾವುದೇ ಉತ್ತರ ನೀಡದೆ ಇದ್ದು ಬೇಜವಾಬ್ದಾರಿತನ ತೋರಿರುವುದರಿಂದ ಮತ್ತು ಮೇಲಾಧಿಕಾರಿಗಳ ಆದೇಶ ಪಾಲಿಸದೇ ಇರುವುದರಿಂದ ಸದರಿ ನೌಕರರ ವಿರುದ್ಧ ಸಿ.ಸಿ.ಎ. ನಿಯಮಗಳನುಸಾರ ಶಿಸ್ತು ಕ್ರಮ ಕೈಗೊಳ್ಳುವಂತೆ ಶಿಫಾರಸ್ಸು ಮಾಡಿರುತ್ತಾರೆ.

ವಲಯ ಅರಣ್ಯಾಧಿಕಾರಿಗಳು ಕಲ್ಲಹಳ್ಳ ವನ್ಯಜೀವಿ ವಲಯ ಇವರು ಮಾಡಿರುವ ಶಿಫಾರಸ್ಸು ಅನ್ವಯ ಸಿ.ಸಿ.ಎ. ನಿಯಮಾವಳಿ 28(ಕ)ರ ಅನುಸಾರವಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿ ದಿನಪತ್ರಿಕೆಗಳಲ್ಲಿ ಪ್ರಕಟಿಸುವಂತೆ ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕೋರಲಾಗಿತ್ತು. ಈ ಕಛೇರಿ ಕೋರಿಕೆ ಅನ್ವಯ ಉಲ್ಲೇಖ ಪತ್ರ (4)ರಲ್ಲಿ ಸೂಚಿಸಿರುವಂತೆ ದಿನಾಂಕ:19.02.2007ರಂದು ಮೈಸೂರು ಮಿತ್ರ ದಿನಪತ್ರಿಕೆಯಲ್ಲಿ ಅಂತಿಮ ನೋಟಿಸ್ ಪ್ರಕಟಣೆ ಆಗಿರುತ್ತದೆ ಹಾಗೂ ಉಲ್ಲೇಖ (5)ರಲ್ಲಿ ಸೂಚಿಸಿರುವಂತೆ ದಿನಾಂಕ:19.02.2007ರಂದು ಕನ್ನಡ ಪ್ರಭ ದಿನ ಪತ್ರಿಕೆಯಲ್ಲಿ ಸಹ ಪ್ರಕಟವಾಗಿದ್ದು 3 ದಿನದ ಒಳಗಾಗಿ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಲಾಗಿತ್ತು.

ಶ್ರೀ ಜೆ.ಕೆ. ಮುತ್ರಾಮ, ಅನೇಕವಾಡಿ ಇವರು ಒಂದು ವರ್ಷಗಳ ಸರ್ಕಾರಿ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿ ಆಗಿರುವ ಬಗ್ಗೆ ಸದರಿ ನೌಕರರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವಂತೆ ಈ ಕಛೇರಿಯಿಂದ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ರವರಿಗೆ ಪ್ರಸ್ತಾವನೆ ಸಲ್ಲಿಸಿದ್ದು, ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ ಪತ್ರ ಉಲ್ಲೇಖ (6)ರಲ್ಲಿ ಈ ಕಛೇರಿಗೆ ಪತ್ರ ಬರೆದು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಅಪೀಲು) ನಿಯಮಗಳಲ್ಲಿ ಅನುಸರಿಸಬೇಕಾದ ನಿಯಮ–11 ಗಳ ಪ್ರಕಾರ ನೌಕರರ ಅಧಿಕೃತ ಗೈರುಹಾಜರಿ ಬಗ್ಗೆ ವಿಚಾರಣೆ ನಡೆಸಿ ನಂತರ ಸೂಕ್ತ ಕ್ರಮ ಜರುಗಿಸುವಂತೆ ಆದೇಶಿಸಿರುವ ಮೇರೆಗೆ ಉಲ್ಲೇಖ ಪತ್ರ (7)ರಲ್ಲಿ ಸದರಿ ನೌಕರರ ಮೇಲೆ ದೋಷರೋಪಣ ಪಟ್ಟಿಯನ್ನು ತಯಾರಿಸಲಾಗಿತ್ತು. ಉಲ್ಲೇಖ ಪತ್ರ (8)ರಲ್ಲಿ ಈ ಕಛೇರಿಯಿಂದ ಅಧಿಕೃತ ಜ್ಞಾಪನಾ ಪತ್ರ ಹೊರಡಿಸಿ ಶ್ರೀ ಜೆ.ಕೆ. ಮುತ್ರಾಮ, ಆನೆಕವಾಡಿ ಇವರ ಮೇಲಿನ ಕರ್ತವ್ಯ ನಿರ್ಲಕ್ಷತೆಯನ್ನು ಕೂಲಂಕುಶವಾಗಿ ಪರಿಶೀಲಿಸಿ ವಿಚಾರಣೆ ನಡೆಸಿ ವರದಿ ನೀಡುವಂತೆ ದಿನಾಂಕ:22.01.2008 ರಂದು ಆದೇಶ ನೀಡಿ ಶ್ರೀ ಸಿ.ಪಿ. ದುರ್ಗೇಗೌಡ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ಉಪವಿಭಾಗ, ನಾಗರಹೊಳೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ವಲಯ ಅರಣ್ಯಾಧಿಕಾರಿ, ವನ್ಯಜೀವಿ ವಲಯ, ನಾಗರಹೊಳೆ ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಿ ಆದೇಶ ನೀಡಲಾಗಿತ್ತು.

ಶ್ರೀ ಸಿ.ಪಿ. ದುರ್ಗೇಗೌಡ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ವಿಚಾರಣಾಧಿಕಾರಿಗಳು ಉಲ್ಲೇಖ ಪತ್ರ (9)ರಲ್ಲಿ ದಿನಾಂಕ:12.03.2009ರಲ್ಲಿ ಶ್ರೀ ಜೆ.ಕೆ. ಮುತ್ರಾಮ, ಆನೆಕವಾಡಿ, ಕಲ್ಲಹಳ್ಳ ವನ್ಯಜೀವಿ ವಲಯ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಶ್ರೀ ಜೆ.ಕೆ. ಮುತ್ರಾಮ ಇವರ ಸ್ವಂತ ವಿಳಾಸಕ್ಕೆ ನೋಟಿಸ್ ಕಳುಹಿಸಿ ದಿನಾಂಕ:19.05.2008 ಮತ್ತು 14.06.2008ರಂದು ವಿಚಾರಣೆಗೆ ಹಾಜರಾಗುವಂತೆ ಸೂಚಿಸಿದ್ದು, ನೌಕರರು ವಿಳಾಸದಲ್ಲಿ ಇಲ್ಲದಿರುವುದಾಗಿ ನೋಂದಾಯಿತ ಅಂಚೆ ಮೂಲಕ ಕಳುಹಿಸಿದ ಪತ್ರ ಅಂಚೆ ಇಲಾಖೆಯಿಂದ ವಾಪಸ್ ಬಂದಿರುವ ಪ್ರಯುಕ್ತ ದಿನಾಂಕ:30.07.2008ರಂದು ವಿಚಾರಣೆ ಮುಂದೂಡಿ ಖುದ್ದು ನೋಟಿಸ್ ಜಾರಿ ಮಾಡಲು ಇಲಾಖಾ ನೌಕರರನ್ನು ಅವರ ವಿಳಾಸಕ್ಕೆ ಕಳುಹಿಸಿ ನೋಟಿಸ್ ಜಾರಿ ಮಾಡುವಂತೆ ಸೂಚಿಸಿದ್ದು, ಶ್ರೀ ಜೆ.ಕೆ. ಮುತ್ರಾಮ ಇವರು ಆ ವಿಳಾಸದಲ್ಲಿ ಇಲ್ಲದೆ ಇದ್ದ ಕಾರಣದಿಂದ ಕಾನೂನು ರೀತ್ಯಾ ಮಹಜರ್ ಕ್ರಮ ಜರುಗಿಸಿ ನೌಕರರ ಮನೆ ಬಾಗಿಲಿಗೆ ನೋಟಿಸನ್ನು ಅಂಟಿಸಿ ಬಂದು ವರದಿ ಮಾಡಿದ್ದು, ಸದರಿ ದಿನಾಂಕದಂದು ವಿಚಾರಣೆಗೆ ಹಾಜರಾಗದ ಕಾರಣ ಮುಂದಿನ ಅಂತಿಮ ವಿಚಾರಣೆಯನ್ನು ದಿನಾಂಕ:25.08.2008ಕ್ಕೆ ಮುಂದೂಡಿ ಇಲಾಖಾ ಪರ ಸಾಕ್ಷಿದಾರರಾದ ವಲಯ ಅರಣ್ಯಾಧಿಕಾರಿಗಳನ್ನು ವಿಚಾರಣೆಗೊಳಪಡಿಸಿ, ವಲಯ ಅರಣ್ಯಾಧಿಕಾರಿ, ಕಲ್ಲಹಳ್ಳ ವನ್ಯಜೀವಿ ವಲಯ ಇವರು ಹೇಳಿಕೆ ನೀಡಿ ಆರೋಪಿತ ನೌಕರರಿಗೆ ಕರ್ತವ್ಯಕ್ಕೆ ಹಾಜರಾಗುವಂತೆ ಅನೇಕ ಬಾರಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಹುಣಸೂರುರವರು ನೋಟಿಸ್ ಜಾರಿ ಮಾಡಿದ್ದು, ಸದರಿ ನೋಟಿಸನ್ನು ನೌಕರರಿಗೆ ಜಾರಿ ಮಾಡಿ, ನೌಕರರು ನೋಟಿಸ್‌ಗೆ ಯಾವುದೇ ಲಿಖಿತ ಉತ್ತರ ನೀಡದೆ ಕರ್ತವ್ಯ ನಿರ್ಲಕ್ಷತೆ ಹಾಗೂ ಅನಧಿಕೃತ ಗೈರು ಹಾಜರಿ ಆಗಿರುವುದನ್ನು ಸಮರ್ಥಿಸಿದ್ದ ಆಪಾದಿತರಿಗೆ ನೀಡಿದ ನೋಟಿಸನ್ನು ಸ್ಪಷ್ಟೀಕರಿಸಿ ಅದನ್ನು ನಿಶಾನೆ EXP-2 ಎಂದು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಹುಣಸೂರು ರವರಿಗೆ ಶ್ರೀ ಜೆ.ಕೆ. ಮುತ್ರಾಮ ಇವರ ಮೇಲೆ ಬರೆದಿರುವ ಪತ್ರವನ್ನು ಪರಿಶೀಲಿಸಿ ನಿಶಾನೆ EXP-(3)(a) ಎಂದು ಗುರುತಿಸಿರುತ್ತಾರೆ.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಹುಣಸೂರು ಇವರು ಆಪಾದಿತ ನೌಕರ ಶ್ರೀ ಜೆ.ಕೆ. ಮುತ್ರಾಮ, ಆನೆಕವಾಡಿ, ಕಲ್ಲಹಳ್ಳ ವನ್ಯಜೀವಿ ವಲಯ ರವರು ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯಾದ ಬಗ್ಗೆ ಪತ್ರಿಕಾ ಪ್ರಕಟಣೆಯನ್ನು ನೀಡಿದ್ದು ಈ ಬಗ್ಗೆ ವಿಚಾರಣೆ ಸಮಯದಲ್ಲಿ ಅವಲೋಕಿಸಿ EXP-5 ಎಂದು ಗುರುತಿಸಿ ಸಮರ್ಥಿಸಿಕೊಂಡಿದ್ದು, ಪಾಟಿ ಸವಾಲು ಏನು ಇಲ್ಲದಿರುವುದರಿಂದ ಅಂತಿಮವಾಗಿ ಶ್ರೀ ಜೆ.ಕೆ. ಮುತ್ರಾಮ, ಆನೆಕವಾಡಿ, ಕಲ್ಲಹಳ್ಳ ವನ್ಯಜೀವಿ ವಲಯ ಇವರು ಕರ್ತವ್ಯಕ್ಕೆ ಹಾಜರಾಗದೆ ಅಶಿಸ್ತು ಮತ್ತು ಕರ್ತವ್ಯ ನಿರ್ಲಕ್ಷತೆ ತೋರಿರುವುದು ನಿಜಾಂಶವಾಗಿರುತ್ತದೆ ಎಂಬುದಾಗಿ ವರದಿ ಮಾಡಿರುವುದರಿಂದ ಶ್ರೀ ಜೆ.ಕೆ. ಮುತ್ರಾಮ, ಆನೆಕವಾಡಿ, ಕಲ್ಲಹಳ್ಳ ವನ್ಯಜೀವಿ ವಲಯ ಇವರು ದಿನಾಂಕ:02.11.2006 ರಿಂದ ನಿರಂತರವಾಗಿ ಕರ್ತವ್ಯಕ್ಕೆ ಗೈರು ಹಾಜರಾಗಿರುವುದರಿಂದ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ 108ರ ಅನುಸಾರವಾಗಿ ಸರ್ಕಾರಿ ಸೇವೆಯಿಂದ ವಜಾ ಮಾಡುವ ಬಗ್ಗೆ ಕೆಳಕಂಡಂತೆ ಆದೇಶ ನೀಡಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಡಿ. ಯತೀಶ್ ಕುಮಾರ್, ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಹುಣಸೂರು ಆದ ನಾನು ಆದೇಶಿಸಿರುವುದೇನೆಂದರೆ, ಶ್ರೀ ಜೆ.ಕೆ. ಮುತ್ರಾಮ, ಆನೆಕವಾಡಿ, ಕಲ್ಲಹಳ್ಳ ವನ್ಯಜೀವಿ ವಲಯ ಇವರು ಸರ್ಕಾರಿ ಕರ್ತವ್ಯಕ್ಕೆ ದಿನಾಂಕ:02.11.2006 ರಿಂದ ಗೈರು ಹಾಜರಾಗಿದ್ದು, ಸರ್ಕಾರಿ ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ಹಾಗೂ ಮೇಲಾಧಿಕಾರಿಗಳ ಆದೇಶವನ್ನು ಪಾಲಿಸದೆ ಕರ್ತವ್ಯ ಚ್ಯುತಿ ಎಸಗಿದ್ದು, ವಿಚಾರಣೆಯಿಂದ ಸಾಬೀತಾದ ಪ್ರಯುಕ್ತ ಕೆ.ಸಿ.ಎಸ್.ಆರ್. ನಿಯಮಾವಳಿ 108ರ ಅನುಸಾರ ಹಾಗೂ ಸಿ.ಸಿ.ಎ. ನಿಯಮಾವಳಿ ಮತ್ತು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಾವಳಿ 1977 ನಿಯಮ 6ರ ಅಡಿಯಲ್ಲಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿ ಆದೇಶಿಸಿದೆ.

**ಡಿ. ಯತೀಶ್‌ಕುಮಾರ್**

ಪಿ.ಆರ್.361

ಶಿಸ್ತು ಪ್ರಾಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಹುಣಸೂರು ವನ್ಯಜೀವಿ ವಿಭಾಗ, ಹುಣಸೂರು.

**KARNATAKA LOKAYUKTA**

**CORRIGENDUM**

**No.Compt/LOK/BCD/420/2008/ARE-9, Bangalore, Dated:27th June, 2009**

In the Public notice issued by this office in No. Compt/LOK/BCD/420/2008/ARE-9, Dated:10.06.2009, the words “Karnataka Power Corporation Limited” mentioned in the 9th line of first para may be read as **“Karnataka Power Transmission Corporation Limited”.**

Bangalore
Date:27.06.2009
PR-574

By the Order of Hon’ble Lokayukta
**MOOSA KUNHI NAYAR MOOLE**
Registrar.

**COMMERCIAL TAXES DEPARTMENT**

**OFFICE OF THE ASSISTANT COMMISSIONER OF COMMERCIAL TAXES, LOCAL VAT OFFICE-65, BANGALORE**

**Present:** B.D. Devaiah,

Asst. Commissioner, of Commercial Taxes, LVO-065.

**Sub:** Loss of blank “F” Form in the case of M/s Carries PIPES AND TUBES(PVT) LTD No.415 166/3A Kempalinganahalli kasaba Hobli Nelamangala, Bangalore Rural Dist-562123.

**Ref:** Letter Dated:26.02.2009 of M/s CARRIES PIPES AND TUBES(PVT) LTD Nelamangala, Bangalore Rural District.

**Preamble:**

M/s CARRIES PIPES AND TUBES(PVT) LTD No.415 166/3A Kempalinganahalli, Kasaba Hobli, Nelamangala, Bangalore Rural Dist-562123. is a registered dealer borne on the files of this office bearing TIN 29780225011. The assessee Company in its letter Dated:26.02.2009 has intimated that the following blank “F” Form No.KAF 0261899 to KAF-0261909 (11 No’s) issued by the department were lost in transit.

The Company has produced the proof for having filed the complaint to the police authorities for loss of above “F” Form and executed Indeminity Bond in favour of the Government as laid down Rule 12(2) and 12(9) of CST Act 1956.

Since the blank “F” Forms No’s KAF 0261899 to KA F 0261909 (11 No’s is stated to be lost while in transit, the Forms so lost are treated as in valid/ Hence this order.

**Order No. ACCT/LVO-065/2009-10, Dated:15th May, 2009**

In view of the circumstances explained above the Blank “F” Forms No.KA F 0261899 to 0621909 (11 No’s) are treated as invalid w.e.f.23/01/2008.

Assistant Commissioner of Commercial Taxes,
LVO-065, Bangalore.

**Office of the Asst. Commissioner of Commercial Taxes Local Vat Office-065, Bangalore**
**Notified Authority Under the Rule 6(5) of the CST (Karnataka) rules 1957**

No.ACCT/LVO 065/08-09, Dated:15.05.2009 by the Virtue of the Provisions of Rule 12(2) of the CST (Registration & Turnover) Rules 1957 & Rule 6(5) of the CST (Karnataka) Rules 1957 is hereby notified for General Information in Form “F” (Blank described below is declared to be obsolete and invalid.

| Number including Code No. of declaration form/s lost destroyed or stolen | Name and address of the dealer to whom declaration form/s is/ are issued by the department with date of issue | Registration Certificate No. of the dealer under CST Act, 1956 | The address of the dealer to whom the declaration Is/are sent | Date of issue of Form/s by the dealer | Whether lost/destroyed or stolen | Remarks |
|---|---|---|---|---|---|---|
| KA-F 0261899 to KA-F 0261909 | CARRIES PIPES AND TUBES (PVT) LTD. No.415 166/3A Kempalinganahalli Kasaba Hobli, Nelamangala, Bangalore. 23.12.2008. | TIN 29780225011 | - | - | LOST | Blank Form |

Assistant Commissioner of Commercial
Taxes, LVO-065, Bangalore.

PR-575

**ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೀದರ ಜಿಲ್ಲೆ, ಬೀದರ**

**ವಿಷಯ:** ಸಮಾಪನೆಗೊಂಡ ಮಹಿಳಾ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಚಿಟ್ಟಾ (ಕೆ) ತಾ: ಬಸವಕಲ್ಯಾಣ ಇದರ ನೊಂದಣಿ ಸಂಖ್ಯೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75ರನ್ವಯ ರದ್ದುಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಉನಿಬಿ/ಎ2/ಸಮಾಪನೆ/2008–09, ದಿನಾಂಕ:16.10.2008.
2) ಸಮಾಪನೆ ಅಧಿಕಾರಿಗಳ ಪ್ರಸ್ತಾವನೆ ದಿನಾಂಕ:11.11.2008.
3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಉಪವಿಭಾಗ, ಬೀದರ ಇವರ ಪತ್ರ ಸಂಖ್ಯೆ/ ಸನಿಬಿ1/ಎ7/ ಸಮಾಪನೆ/2008–2009, ದಿನಾಂಕ:20.11.2008.

**ಪ್ರಸ್ತಾವನೆ:**

ಮಹಿಳಾ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಚಿಟ್ಟಾ (ಕೆ) ತಾ: ಬಸವಕಲ್ಯಾಣ ಇದರ ಕಾರ್ಯ ಚಟುವಟಿಕೆಗಳು ಸಂಪೂರ್ಣವಾಗಿ ಸ್ಥಗಿತಗೊಂಡಿರುವುದರಿಂದ ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಹುಮನಾಬಾದ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಅದರಂತೆ ಸಮಾಪನಾಧಿಕಾರಿಗಳು ಪುನಃಶ್ಚೇತನಗೊಳಿಸಲು ಯಾವ ಸದಸ್ಯರಲ್ಲಿ ಆಸಕ್ತಿಯಿರುವುದಿಲ್ಲವೆಂದು ತೀರ್ಮಾನಿಸಿರುತ್ತಾರೆ. ಲಭ್ಯವಿದ್ಧ ದಾಖಲಾತಿಗಳ ಪ್ರಕಾರ ಸಂಘದಲ್ಲಿ ಯಾವುದೇ ಆಸ್ತಿ ಜವಾಬ್ದಾರಿ ಇರುವುದಿಲ್ಲ ಪ್ರಯುಕ್ತ ಇದರ ನೊಂದಣಿಯನ್ನು

ರದ್ದುಪಡಿಸಲು ಉಲ್ಲೇಖ (2)ರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ರವರು ಸಹ ಸದರಿ ಸಂಘದಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಏನು ಇರುವುದಿಲ್ಲ. ಮತ್ತು ಸಂಘದಲ್ಲಿ ಯಾವ ಆಸ್ತಿ ವಸೂಲಿ ಮಾಡಲು ಬರುವುದಿಲ್ಲ. ಮತ್ತು ಇದರ ಕಾರಣದಿಂದ ಜವಾಬ್ದಾರಿಯನ್ನು ಇತ್ಯಾರ್ಥಗೊಳಿಸಲು ಸಾಧ್ಯವಿಲ್ಲವೆಂದು ಪರಿಗಣಿಸಿ ಇದರ ನೊಂದಣಿ ಸಂಖ್ಯೆ: ಸನಿಬಿ1/ವಿ4/ನೊಂದಣಿ/33704/2003–04/ ದಿನಾಂಕ:31.03.2004 ರದ್ದುಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ. ಆದುದರಿಂದ ಕೆಳಕಂಡ ಆದೇಶ.

**ಆದೇಶ**

**ಸಂಖ್ಯೆ: ಉನಿಬಿ/ವಿ1/ಸಮಾಪನೆ/ಸಿಆರ್/2008–2009, ದಿನಾಂಕ:31ನೇ ಡಿಸೆಂಬರ್, 2008**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/200 ದಿನಾಂಕ:21.11.2001 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತ ಚವ್ಹಾಣ ಗೋಪಾಲ ಸಹಕಾರ ಸಂಘಗಳ ಉಪನಿಬಂಧಕರು, ಬೀದರ ಜಿಲ್ಲೆ, ಬೀದರ ಆದ ನಾನು ಸಮಾಪನೆಗೊಂಡ ಮಹಿಳಾ ಹಾಲು ಉತ್ಪಾದಕರ ಸಂಘ ನಿಯಮಿತ ಚಿಟ್ಟಾ (ಕೆ) ತಾ: ಬಸವಕಲ್ಯಾಣ ಇದರ ನೊಂದಣಿ ಸಂಖ್ಯೆ: ಸನಿಬಿ1/ವಿ4/ನೊಂದಣಿ/33704/2003–04/ ದಿನಾಂಕ:31.03.2004ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ನಿಂತುಹೋಗಿರುತ್ತವೆಂದು ಭಾವಿಸತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳ 1960ರ ನಿಯಮ 33 (ಎನ್) ರನ್ವಯ ಈ ಸಂಘದ ಎಲ್ಲಾ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ದಿನಾಂಕ:31.12.2008ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಪಿ.ಆರ್.116 ಸಹಕಾರ ಸಂಘಗಳ ಉಪನಿಬಂಧಕರು, ಬೀದರ ಜಿಲ್ಲೆ, ಬೀದರ.

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು ರವರ ನಡವಳಿಗಳು**

**ವಿಷಯ:** ಸ್ಥಗಿತಗೊಂಡಿರುವ ಮೈಸೂರು ಜಿಲ್ಲಾ ಸಹಕಾರ ಕೃಷಿ ಉತ್ಪನ್ನಗಳ ಮಾರಾಟ ಒಕ್ಕೂಟ ನಿ., ಮೈಸೂರು ಇದರ ಸಮಾಪನೆಗೆ ಪ್ರಸ್ತಾವೆ ಸಲ್ಲಿಸುವ ಕುರಿತು.

**ಉಲ್ಲೇಖ:** 1) ಸ.ಸಂ.ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಇವರ ಕಛೇರಿ ಪತ್ರ ಸಂಖ್ಯೆ: ಜೆಆರ್ಎಂ /ಎಸ್/10 / ಎಲ್ಕ್ಯೂಡಿ/ಸಿಆರ್/7/2008–09, ದಿನಾಂಕ:26.08.2008.

**ಪ್ರಸ್ತಾವನೆ:**

ಮೈಸೂರು ಜಿಲ್ಲಾ ಸಹಕಾರ ಕೃಷಿ ಉತ್ಪನ್ನಗಳ ಮಾರಾಟ ಒಕ್ಕೂಟ ನಿ., ಮೈಸೂರು ಈ ಸಂಘವನ್ನು ನೊಂದಣಿ ಸಂಖ್ಯೆ: ಜೆಆರ್ಎಂ/ಎಡಿಎಂ/ಬಿ–2/ಆರ್‌ಜಿಎನ್/24336/1998–99, ದಿನಾಂಕ:29.08.1998ರನ್ವಯ ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ಇವರಲ್ಲಿ ನೋಂದಣಿ ಆಗಿರುತ್ತದೆ. ಸಂಘದ ಕಾರ್ಯ ವ್ಯಾಪ್ತಿಯು ಜಿಲ್ಲಾ ಮಟ್ಟದ್ದಾಗಿರುತ್ತದೆ. ಸಂಘವು ತನ್ನ ಉದ್ದೇಶಿತ ಬೈಲಾ ಪ್ರಕಾರ ಒಕ್ಕೂಟದ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸದೆ ಸ್ಥಗಿತಗೊಂಡಿರುವುದರಿಂದ ಹಾಗೂ ಸಂಘದ ಆಡಳಿತ ಮಂಡಳಿ ಸದಸ್ಯರು ಸಂಘವನ್ನು ಮುನ್ನಡೆಸಿಕೊಂಡು ಹೋಗುವಲ್ಲಿ ಆಸಕ್ತಿಹೊಂದಿಲ್ಲದ ಕಾರಣ ಮತ್ತು ಸಂಘದಲ್ಲಿ ಆಡಳಿತ ಮಂಡಳಿ ಅಸ್ತಿತ್ವದಲ್ಲಿ ಇಲ್ಲದ ಕಾರಣ ಸಂಘದ ಪ್ರಭಾರ ವ್ಯವಸ್ಥಾಪಕ ನಿರ್ದೇಶಕರಾದ ಸಹಕಾರ ಸಂಘಗಳ ಉಪನಿಬಂಧಕರು, ಮೈಸೂರು ಜಿಲ್ಲೆ, ಮೈಸೂರು ಇವರು ಸಮಾಪನೆಗೊಳಿಸಲು ಕೋರಿರುತ್ತಾರೆ. ಅದರಂತೆ ಸಂಘದ ಕಾರ್ಯಾಲಯವು ಮೈಸೂರು ಜಿಲ್ಲಾ ಸಹಕಾರ ಒಕ್ಕೂಟ ಇದರ ಆಡಳಿತ ಕಛೇರಿಯಲ್ಲಿ ರೂ.500.00ಕ್ಕೆ ಮಾಹೆಯಾನ ಬಾಡಿಗೆ ರೂಪದಲ್ಲಿ ಒಂದು ಕೊಠಡಿಯನ್ನು ಪಡೆದಿದ್ದು, ಠೇವಣಿ ಮೇಲಿನ ಬಡ್ಡಿಯಿಂದ ಬರುವ ಹಣದಿಂದ ಕಛೇರಿ ಬಾಡಿಗೆ ಹಾಗೂ ನೌಕರರ ಸಂಬಳ ನೀಡುತ್ತಿದ್ದು, ಇದರಿಂದ ಸಂಘವು ನಷ್ಟವನ್ನು ಅನುಭವಿಸುತ್ತಿರುವುದಾಗಿ ತಿಳಿಸಿರುತ್ತಾರೆ.

ಸಂಘವು ಪ್ರಾರಂಭದಲ್ಲಿ ಗೊಬ್ಬರ ವ್ಯಾಪಾರ ನಡೆಸುತ್ತಿದ್ದು, ನಂತರದ ದಿನಗಳಲ್ಲಿ ಯಾವುದೇ ಅಭಿವೃದ್ಧಿ ಪರ ಕೆಲಸ ನಿರ್ವಹಿಸುವಲ್ಲಿ ಸಂಪೂರ್ಣ ವಿಫಲರಾಗಿರುತ್ತಾರೆ. ಸದರಿ ಒಕ್ಕೂಟದಲ್ಲಿ 89 ವಿವಿಧ ಸಹಕಾರ ಸಂಸ್ಥೆಗಳು ಸದಸ್ಯರಾಗಿದ್ದು, ಸದರಿ ಸಂಸ್ಥೆಗಳಿಂದ ರೂ.10,50,000/–ಗಳ ಷೇರು ಸಂಗ್ರಹಿಸಿದ್ದು, ಇದೇ ಮೊತ್ತದಲ್ಲಿ ಕಛೇರಿ ಮುಂಗಡ ರೂ.2,50,000/–ಗಳನ್ನು ಪಾವತಿಸಿದ್ದು, ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಮೈಸೂರು ಇಲ್ಲಿ ರೂ.4,59,000/– ಗಳನ್ನು ನಿಖರ ಠೇವಣಿ ಮಾಡಿರುವುದಾಗಿ ತಿಳಿಸಿರುತ್ತಾರೆ ಹಾಗೂ ಫ್ಯಾಕ್ಸ್ ಬೆಂಗಳೂರು ಇಲ್ಲಿ ರೂ.1,03,000/–ಗಳನ್ನು ಠೇವಣಿ ಮಾಡಿರುವುದಾಗಿ ತಿಳಿಸಿರುತ್ತಾರೆ. ಸದರಿ ಒಕ್ಕೂಟದ ಲೆಕ್ಕ ಪರಿಶೋಧನೆಯು 2004–05ನೇ ಸಾಲಿನವರೆಗೆ ಆಗಿದ್ದು, ನಂತರದ ವರ್ಷಗಳ ಲೆಕ್ಕಪರಿಶೋಧನೆಗೆ ಕೋರಿರುವುದಾಗಿ ತಿಳಿಸಿರುತ್ತಾರೆ.

ಹೀಗೆ ಸಂಸ್ಥೆಯು ಯಾವುದೇ ಕಾರ್ಯಕ್ರಮ ಹಮ್ಮಿಕೊಳ್ಳದೆ ಆಡಳಿತ ಮಂಡಳಿ ಸದಸ್ಯರು ಸಕ್ರಿಯವಾಗಿ ಸಂಘದ ಕೆಲಸ ಕಾರ್ಯದಲ್ಲಿ ಪಾಲ್ಗೊಳ್ಳದೆ ನಿಷ್ಕ್ರಿಯಗೊಂಡಿದ್ದು, ಒಕ್ಕೂಟವನ್ನು ಯಥಾ ಸ್ಥಿತಿಯಲ್ಲೇ ಮುಂದುವರೆಸಿದಲ್ಲಿ ಪ್ರತಿ ವರ್ಷ ನಷ್ಟದ ಪ್ರಮಾಣ ಜಾಸ್ತಿಯಾಗಿ ಸದಸ್ಯ ಸಹಕಾರ ಸಂಘಗಳ ಷೇರು ಮೊತ್ತಕ್ಕೆ ತುತ್ತಾಗುವ ಸಂಭವವಿರುವುದಾಗಿ ತಿಳಿಸಿರುತ್ತಾರೆ.

ಸದರಿ ಒಕ್ಕೂಟದಲ್ಲಿ ಆಡಳಿತ ಮಂಡಳಿ ಅಸ್ತಿತ್ವದಲ್ಲಿ ಇರುವುದಿಲ್ಲವಾದ್ದರಿಂದ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ) ರನ್ವಯ ಸಮಾಪನೆಗೊಳಿಸಿ, ಸಹಕಾರ ಸಂಘಗಳ ಉಪನಿಬಂಧಕರು, ಮೈಸೂರು ಜಿಲ್ಲೆ, ಮೈಸೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸುವಂತೆ ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ಇವರು ಶಿಫಾರಸ್ಸು ಮಾಡಿರುತ್ತಾರೆ.

ಅದರಂತೆ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಸದರಿ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರಂತೆ ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಗಿನ ಆದೇಶ ಹೊರಡಿಸಿದೆ.

**ಆದೇಶ**

**ಸಂಖ್ಯೆ: ಆರ್‌ಸಿಎಸ್/ಎಲ್‌ಕ್ಯೂಡಿ/43/2007–08, ದಿನಾಂಕ:28ನೇ ಜನವರಿ, 2009**

ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹೆಚ್.ಡಿ.ರಮೇಶ್, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಆದ ನಾನು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2001, ದಿನಾಂಕ:21.11.2001 ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರನ್ವಯ ದತ್ತವಾಗಿರುವ ಅಧಿಕಾರದನ್ವಯ ಮೈಸೂರು ಜಿಲ್ಲಾ ಸಹಕಾರ ಕೃಷಿ ಉತ್ಪನ್ನಗಳ ಮಾರಾಟ ಒಕ್ಕೂಟ ನಿ., ಮೈಸೂರು ಈ ಸಂಘವನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1)ರನ್ವಯ ಸಹಕಾರ ಸಂಘಗಳ ಉಪನಿಬಂಧಕರು, ಮೈಸೂರು ಜಿಲ್ಲೆ, ಮೈಸೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು 15 ದಿನಗಳೊಳಗಾಗಿ ಪಡೆದುಕೊಂಡು ಪ್ರಭಾರ ಪಟ್ಟಿಯನ್ನು ಸಲ್ಲಿಸತಕ್ಕದ್ದು. ಅಲ್ಲದೆ ಸಂಘದ ಅಢಾವೆ ಪತ್ರದ ಆಧಾರದ ಮೇಲೆ ಆದ್ಯತಾ ಪಟ್ಟಿ ತಯಾರಿಸಿ ಈ ಕಛೇರಿಯಿಂದ ಅನುಮತಿ ಪಡೆದು ಆಸ್ತಿಯು ವಸೂಲಾದಂತೆ ಆದ್ಯತೆ ಮೇಲೆ ಜವಾಬ್ದಾರಿ ತೀರುವಳಿ ಮಾಡಿ ಸಂಘದ ನೋಂದಣಿ ರದ್ಧತಿಯ ಪ್ರಸ್ತಾವನೆ ಜರೂರು ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:28.01.2009 ರಂದು ಹೊರಡಿಸಲಾಗಿದೆ.

ಪಿ.ಆರ್.121 ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ)

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ನಿಬಂಧಕರು ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು ರವರ ನಡವಳಿಗಳು**

**ವಿಷಯ:** ಸ್ಥಗಿತಗೊಂಡಿರುವ ನ್ಯಾಯಾಂಗ ಇಲಾಖಾ ನೌಕರರ ಸಹಕಾರ ಸಂಘ (ನಿ) ಮಂಡ್ಯ ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72ರ ಮೇರೆಗೆ ಸಮಾಪನೆಗೊಳಿಸಲು ಪ್ರಸ್ತಾವೆ ಸಲ್ಲಿಸುವ ಕುರಿತು.

**ಉಲ್ಲೇಖ:** 1) ಸಹಕಾರ ಸಂಘಗಳ ಜಂಟಿ ನಿಬಂಧಕರು ಮೈಸೂರು ಪ್ರಾಂತ ಮೈಸೂರು, ಇವರ ಪತ್ರ ಸಂಖ್ಯೆ: JRM.S-10/LQD/CR/32/2007-08, ದಿನಾಂಕ:16.10.2007.

**ಪ್ರಸ್ತಾವನೆ:**

ನ್ಯಾಯಾಂಗ ಇಲಾಖಾ ನೌಕರರ ಸಹಕಾರ ಸಂಘ(ನಿ) ಮಂಡ್ಯ, ಈ ಸಂಘವು ನೋಂದಣಿ ಸಂಖ್ಯೆ:9048/ ದಿನಾಂಕ:04.08.1982ರಲ್ಲಿ ನೋಂದಣಿಯಾಗಿರುತ್ತದೆ. ಇದರ ಕಾರ್ಯವ್ಯಾಪ್ತಿಯು ಮಂಡ್ಯ ಜಿಲ್ಲಾದ್ದಾಗಿರುತ್ತದೆ.

ಸಹಕಾರ ಸಂಘಗಳ ಜಂಟಿ ನಿಬಂಧಕರ ವರದಿಯಂತೆ ಸಂಘವು ತನ್ನ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಹೋಗುವಲ್ಲಿ ವಿಫಲವಾದ ಹಿನ್ನೆಲೆಯಲ್ಲಿ ಸಂಘವನ್ನು ಪುನರುಜ್ಜೀವನಗೊಳಿಸಿಕೊಂಡು ಮುನ್ನಡೆಸಿಕೊಂಡು ಹೋಗುವ ಬಗ್ಗೆ ಸಂಘದ ಸದಸ್ಯರು ಆಸಕ್ತಿ ವಹಿಸದ ಕಾರಣ ಸಾರ್ವಜನಿಕ ಪ್ರಕಟಣೆ ಹೊರಡಿಸಿ ಸಂಘವನ್ನು ಸಮಾಪನೆಗೊಳಿಸುವುದರ ವಿರುದ್ಧ ಆಕ್ಷೇಪಣೆಗಳಿದ್ದಲ್ಲಿ ಸಲ್ಲಿಸುವಂತೆ ಪ್ರಕಟಣೆಯಲ್ಲಿ ಸೂಚಿಸಿದ್ದು, ನಿಗದಿತ ಅವಧಿಯೊಳಗೆ ಯಾವುದೇ ಆಕ್ಷೇಪಣೆಗಳು ಬಾರದ ಕಾರಣ ಸಂಘದ ಅಸ್ತಿತ್ವದಿಂದ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನವೂ ಇರುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ಸಂಘವನ್ನು ಪುನಶ್ಚೇತನಗೊಳಿಸಲು ಯಾವುದೇ ಸಾಧ್ಯತೆಗಳು ಇಲ್ಲದೇ ಇರುವುದರಿಂದ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಸಮಾಪನೆಗೊಳಿಸಲು ಸಹಕಾರ ಸಂಘಗಳ ಜಂಟಿ

ನಿಬಂಧಕರು, ಮೈಸೂರು ಪ್ರಾಂತ ಮೈಸೂರು ಇವರು ಶಿಫಾರಸ್ಸು ಮಾಡಿರುತ್ತಾರೆ. ಸದರಿ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರಂತೆ ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಗಿನ ಆದೇಶ ಹೊರಡಿಸಿದೆ.

**ಆದೇಶ**

**ಸಂಖ್ಯೆ: ಆರ್‌ಸಿಎಸ್/ಎಲ್‌ಕ್ಯೂಡಿ/43/2007-08, ದಿನಾಂಕ:28ನೇ ಜನವರಿ, 2009**

ಪ್ರಸ್ತಾವೆಯಲ್ಲಿ ಪ್ರಸ್ತಾಪಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹೆಚ್.ಡಿ.ರಮೇಶ್, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಆದ ನಾನು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2001, ದಿನಾಂಕ:21.11.2001 ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರನ್ವಯ ದತ್ತವಾಗಿರುವ ಅಧಿಕಾರದನ್ವಯ ನ್ಯಾಯಾಂಗ ಇಲಾಖಾ ನೌಕರರ ಸಹಕಾರ ಸಂಘ (ನಿ) ಮಂಡ್ಯ, ಈ ಸಂಘವನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1)ರನ್ವಯ ಸಹಕಾರ ಸಂಘಗಳ ಸಹಾಯಕನಿಬಂಧಕರು, ಮಂಡ್ಯ ಜಿಲ್ಲೆ, ಮಂಡ್ಯ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು 15 ದಿನಗಳೊಳಗಾಗಿ ಪಡೆದುಕೊಂಡು ಪ್ರಭಾರ ಪಟ್ಟಿಯನ್ನು ಸಲ್ಲಿಸತಕ್ಕದ್ದು. ಅಲ್ಲದೆ ಸಂಘದ ಅಢಾವೆ ಪತ್ರದ ಆಧಾರದ ಮೇಲೆ ಆದ್ಯತಾ ಪಟ್ಟಿ ತಯಾರಿಸಿ ಈ ಕಛೇರಿಯಿಂದ ಅನುಮತಿ ಪಡೆದು ಆಸ್ತಿಯು ವಸೂಲಾದಂತೆ ಆದ್ಯತೆ ಮೇಲೆ ಜವಾಬ್ದಾರಿ ತೀರುವಳಿ ಮಾಡಿ ಸಂಘದ ನೋಂದಣಿ ರದ್ಧತಿಯ ಪ್ರಸ್ತಾವನೆ ಜರೂರು ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:28.01.2009 ರಂದು ಹೊರಡಿಸಲಾಗಿದೆ.

ಪಿ.ಆರ್.122 ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ)

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು**

**ವಿಷಯ:** ಸಮಾಪನೆಗೊಂಡಿರುವ ಸಂಕ್ಲೀಪುರ ಭೂ ಅಭಿವೃದ್ಧಿ ಸಹಕಾರ ಸಂಘ ನಿ., ಸಂಕ್ಲೀಪುರ, ಹರಿಹರ-ತಾ: ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಸಮಸಂಖ್ಯೆ ಆದೇಶ ದಿನಾಂಕ:08.08.2006.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ರವರು ಸಲ್ಲಿಸಿರುವ ಪ್ರಸ್ತಾವೆ ದಿನಾಂಕ:09.01.2009.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ: ಎಆರ್-31/ಆರ್‌ಜಿಎನ್/ಎಂಕೆಟಿ/21045/1994-95, ದಿನಾಂಕ:24.11.1994 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಹರಿಹರ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್:ಡಿವಿಜಿ:ಎಲ್‌ಕ್ಯೂಡಿ:ಸಿಆರ್-12:2002-03, ದಿನಾಂಕ:27ನೇ ಜನವರಿ, 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಸಂಕ್ಲೀಪುರ ಭೂ ಅಭಿವೃದ್ಧಿ ಸಹಕಾರ ಸಂಘ ನಿ., ಸಂಕ್ಲೀಪುರ, ಹರಿಹರ-ತಾ: ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ನಿಂತುಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ

ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ, ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:27.01.2009 ರಂದು ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.123

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು**

**ನಂ.ಡಿ.ಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–13/2008–09, ದಿನಾಂಕ:24ನೇ ಫೆಬ್ರವರಿ, 2009**

**ವಿಷಯ:** ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮಿಟ್ಲಕಟ್ಟೆ, ಹರಿಹರ–ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ಪತ್ರ ದಿನಾಂಕ:25.10.2008.

2) ವ್ಯವಸ್ಥಾಪಕ ನಿರ್ದೇಶಕರು, ಶಿಮೂಲ, ಶಿವಮೊಗ್ಗರವರ ಪತ್ರ ದಿನಾಂಕ:05.11.2008.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ, ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯಚಟುವಟಿಕೆಗಳು ಹಲವು ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲರಾಗಿರುತ್ತಾರೆ. ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ ಎಂದು ವರದಿ ಸಲ್ಲಿಸಿರುತ್ತಾರೆ, ಉಲ್ಲೇಖ (2)ರ ಪತ್ರದ ರೀತ್ಯಾ ವ್ಯವಸ್ಥಾಪಕ ನಿರ್ದೇಶಕರು, ಶಿಮೂಲ್ ಇವರೂ ಕೂಡ ಮೇಲ್ಕಂಡ ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಆದ ಕಾರಣ ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ಬಿ. ಕುಬೇರಪ್ಪ ಕೆ.ಸಿ.ಎಸ್. ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಆದ ನಾನು ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮಿಟ್ಲಕಟ್ಟೆ, ಹರಿಹರ–ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ **ಸಹಕಾರ ಅಭಿವೃದ್ಧಿ ಅಧಿಕಾರಿ, ಹರಿಹರ,** ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:24.02.2009 ರಂದು ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.200

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು**

**ವಿಷಯ:** ಸಮಾಪನೆಗೊಂಡಿರುವ ನೀರಾ, ಪಾನ, ಬೆಲ್ಲ, ಸಹಕಾರ ಸಂಘ ನಿ., ದಾವಣಗೆರೆ, ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಸಮಾಪನೆ/ಸಿಆರ್–43/2006–07, ದಿನಾಂಕ:14.03.2007.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಪತ್ರ ದಿನಾಂಕ:06.02.2009.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ: ಎಆರ್‌ಸಿ/720/ ದಿನಾಂಕ:01.12.1935 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ದಿನಾಂಕ:14.03.2007ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, 2ನೇ ವೃತ್ತ, ದಾವಣಗೆರೆ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಡಿ.ಆರ್/ಡಿವಿಜಿ/ನೋಸಂರ/ಸಿಆರ್–43/2006–07, ದಿನಾಂಕ:20ನೇ ಫೆಬ್ರವರಿ, 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ನೀರಾ, ಪಾನ, ಬೆಲ್ಲ, ಸಹಕಾರ ಸಂಘಗಳ ನಿ., ದಾವಣಗೆರೆ ಇದರ ನೋಂದಣಿಯನ್ನು ರದ್ಧುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ನಿಂತುಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:20.02.2009 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.201

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು**

**ವಿಷಯ:** ಸಮಾಪನೆಗೊಂಡಿರುವ ಸ್ವಾಮಿ ವಿವೇಕಾನಂದ ವಿದ್ಯಾರ್ಥಿ ಬಳಕೆದಾರರ ಸಹಕಾರ ಸಂಘ ನಿ., ದಾವಣಗೆರೆ, ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಸಮಾಪನೆ/ಸಿಆರ್–51/2006–07, ದಿನಾಂಕ:14.03.2007.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಪತ್ರ ದಿನಾಂಕ:06.02.2009.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ: ಸನಿ–31/ಸಿಆರ್–69/18663/93–94, ದಿನಾಂಕ:15.01.1994 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ದಿನಾಂಕ:14.03.2007ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, 2ನೇ ವೃತ್ತ, ದಾವಣಗೆರೆ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಡಿ.ಆರ್/ಡಿವಿಜಿ/ನೋಸಂರ/ಸಿಆರ್–51/2006–07, ದಿನಾಂಕ:20ನೇ ಫೆಬ್ರವರಿ, 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ

ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಸ್ವಾಮಿ ವಿವೇಕಾನಂದ ವಿದ್ಯಾರ್ಥಿ ಬಳಕೆದಾರರ ಸಹಕಾರ ಸಹಕಾರ ಸಂಘಗಳ ನಿ., ದಾವಣಗೆರೆ ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ನಿಂತುಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:20.02.2009 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಪಿ.ಆರ್.202 ದಾವಣಗೆರೆ ಜಿಲ್ಲೆ, ದಾವಣಗೆರೆ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಡಿಟಿಸಿಆರ್/36/2007-08, ದಿನಾಂಕ:24ನೇ ಫೆಬ್ರವರಿ, 2009**
**ಅಬಕಾರಿ ಉಪನಿರೀಕ್ಷಕರು, ಜಾರಿ ಮತ್ತು ತನಿಖೆ, ಮದ್ದೂರು ತಾಲ್ಲೂಕು ಇವರ ಪ್ರ.ಮಾ.ವ.ಸಂ: 07/2007-08, ದಿನಾಂಕ:17.08.2007**

| ಫಿರ್ಯಾದುದಾರರು | ಆರೋಪಿ |
|---|---|
| ಅಬಕಾರಿ ಉಪನಿರೀಕ್ಷಕರು (ಜಾ ಮತ್ತು ತ) ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ, ಮಂಡ್ಯ. | ತಲೆತಪ್ಪಿಸಿಕೊಂಡಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:17.08.2007ರಂದು ಮಧ್ಯಾಹ್ನ 12.00 ಗಂಟೆ ಸಮಯದಲ್ಲಿ ಮದ್ದೂರು ತಾಲ್ಲೂಕು, ಮೈಸೂರು-ಬೆಂಗಳೂರು ರಸ್ತೆಯ ರುದ್ರಾಕ್ಷಿಪುರ ಗೇಟ್‌ನಿಂದ ಕೆ.ಕೋಡಿಹಳ್ಳಿ ಗ್ರಾಮಕ್ಕೆ ಹೋಗುವ ರಸ್ತೆಯ ಕ್ರಾಸ್ ಬಳಿ ಅಕ್ರಮವಾಗಿ ಟಿ.ವಿ.ಎಸ್. ಸ್ಪೋರ್ಟ್ಸ್ ಮೊಪೆಡ್ ನೋಂದಣಿ ಸಂಖ್ಯೆ: ಕೆಎ-05-/ಇಇ-2044 ವಾಹನದಲ್ಲಿ 8.640 ಲೀ ತೆರಿಗೆ ರಹಿತ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಫಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11 ಮತ್ತು 14ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 34, 38(ಎ) ಮತ್ತು 43(ಎ) ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಹಾಗೂ ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತು ಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ. ಸಂಖ್ಯೆ: 07/2007-08 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡುಬಂದಿದ್ದು ಅವು ಭಾರತದ ಮಾನಕ ಬ್ಯೂರೋಗೆ ಅನುಗುಣವಾಗಿರುವುದಿಲ್ಲ ಮತ್ತು ನಕಲಿ ಮದ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ, ವಾಹನ ಹಾಗೂ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:09.11.2007ರ ಪತ್ರದ ಮೂಲಕ ಕೋರಿರುತ್ತಾರೆ.

ಅದರಂತೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡವಳಿಗಳನ್ನು ಕೈಗೊಂಡಿದ್ದು, ಮದ್ಯವನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:13.11.2007ರಂದು ಸರ್ಕಾರಕ್ಕೆ ಈಗಾಗಲೇ ಮುಟ್ಟುಗೋಲು ಹಾಕಿಕೊಂಡು ಆದೇಶ ಹೊರಡಿಸಿದೆ.

ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ದಕ್ಷಿಣ) ಇವರು ನೀಡಿರುವ "ಬಿ" ವಹಿಯಲ್ಲಿ ವಾಹನ ಸಂಖ್ಯೆ: ಕೆಎ-05-ಇಇ-2044ಗೆ ಸಂಬಂಧಿಸಿದಂತೆ ಶ್ರೀ ಆನಂದ್‌ರಾಜ್ ಜಿ. ಬಿನ್ ಗೋಪಾಲ್‌ರಾಜ್, ಬಿಡಬ್ಲ್ಯೂಎಸ್‌ಎಸ್‌ಬಿ ರೋಡ್, ರಂಗನಾಥ ಎಕ್ಸ್‌ಟೆನ್ಷನ್, ಮುನಿಸಿಪಲ್ ಹೈಸ್ಕೂಲ್ ಹತ್ತಿರ, ಕನಕಪುರ ಟೌನ್, ಬೆಂಗಳೂರು ಜಿಲ್ಲೆ ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:19.12.2007ರಂದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರನ್ವಯ ಕಾರಣ ಕೇಳುವ ನೋಟೀಸ್ ನೀಡಲಾಗಿತ್ತು.

ವಾಹನದ ಮಾಲೀಕರು ದಿನಾಂಕ:07.01.2008ರ ಪತ್ರದಲ್ಲಿ ವಾಹನವನ್ನು ಬೇರೊಬ್ಬರಿಗೆ ಮಾರಾಟ ಮಾಡಿದ್ದು, ತನಗೂ ಹಾಗೂ ವಾಹನಕ್ಕೂ ಯಾವುದೇ ಸಂಬಂಧವಿರುವುದಿಲ್ಲ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮುಂದಿನ ಕ್ರಮ ತೆಗೆದುಕೊಳ್ಳುವ ಬಗ್ಗೆ ತಕರಾರು ಏನು ಇರುವುದಿಲ್ಲವೆಂದು ತಿಳಿಸಿರುತ್ತಾರೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಟಿ.ವಿ.ಎಸ್. ಸ್ಪೋರ್ಟ್ಸ್ ಮೊಪೆಡ್ ನೋಂದಣಿ ಸಂಖ್ಯೆ: ಕೆಎ-05-/ಇಇ-2044 ವಾಹನದಲ್ಲಿ ದಿನಾಂಕ:17.08.2007ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು

ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತುಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಹಾಗೂ ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಅದರ ಬಿಡಿ ಭಾಗಗಳು ತುಕ್ಕು ಹಿಡಿದು ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/36/2007–08, ದಿನಾಂಕ:24ನೇ ಫೆಬ್ರವರಿ, 2009**

ಡಾ: ವೈ. ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಮದ್ದೂರು ತಾಲ್ಲೂಕು ಇವರ ಪ್ರ.ಮಾ.ವ ಸಂಖ್ಯೆ: 07/2007–08, ದಿನಾಂಕ:17.08.2007ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಟಿ.ವಿ.ಎಸ್. ಸ್ಪೋರ್ಟ್ಸ್ ಮೊಪೆಡ್ ನೊಂದಣಿ ಸಂಖ್ಯೆ: ಕೆಎ–05–/ಇಇ–2044 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:24.02.2009ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.212

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಡಿಟಿಸಿಆರ್/58/2007–08, ದಿನಾಂಕ:24ನೇ ಫೆಬ್ರವರಿ, 2009**

**ಅಬಕಾರಿ ಉಪನಿರೀಕ್ಷಕರು, ಜಾರಿ ಮತ್ತು ತನಿಖೆ, ಮದ್ದೂರು ತಾಲ್ಲೂಕು ಇವರ ಪ್ರ.ಮಾ.ವ.ಸಂ: 10/2007–08, ದಿನಾಂಕ:03.10.2007**

| **ಫಿರ್ಯಾದುದಾರರು** | **ಆರೋಪಿ** |
| --- | --- |
| ಅಬಕಾರಿ ಉಪನಿರೀಕ್ಷಕರು (ಜಾ ಮತ್ತು ತ) ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ, ಮಂಡ್ಯ. | ತಲೆತಪ್ಪಿಸಿಕೊಂಡಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:03.10.2007ರಂದು ರಾತ್ರಿ 11.30 ಗಂಟೆ ಸಮಯದಲ್ಲಿ ಮದ್ದೂರು ತಾಲ್ಲೂಕು, ಕೊಪ್ಪ ಹೋಬಳಿ, ನಂಬಿನಾಯಕನಹಳ್ಳಿ ಗ್ರಾಮದ ಬಸ್ ನಿಲ್ದಾಣದ ಸಮೀಪವಿರುವ ಪಾಳು ಜಾಗದಲ್ಲಿ ಅಕ್ರಮವಾಗಿ 190.080 ಲೀ. ನಕಲಿ ಮದ್ಯವನ್ನು ವಾಹನ ಬಜಾಜ್ ಲಗೇಜ್ ಆಟೋ ಸಂಖ್ಯೆ: ಸಿಎಎ–3940 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಫಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, 13 ಎಫ್ ಮತ್ತು 14ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 32, 38(ಎ) ಮತ್ತು 43 ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಹಾಗೂ ಮದ್ಯವನ್ನು ಪಂಚನಾಮೆಯಲ್ಲಿ ಅಮಾನತ್ತು ಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ. ಸಂಖ್ಯೆ: 10/2007–08 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡುಬಂದಿದ್ದು ಅವು ಮಾನವನ ಸೇವನೆಗೆ ಯೋಗ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ, ವಾಹನ ಹಾಗೂ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:12.11.2007 ಮತ್ತು 18.08.2008ರ ಪತ್ರದ ಮೂಲಕ ಕೋರಿರುತ್ತಾರೆ.

ಅದರಂತೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡವಳಿಗಳನ್ನು ಕೈಗೊಂಡಿದ್ದು, ಮದ್ಯವನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:13.11.2007ರಂದು ಸರ್ಕಾರಕ್ಕೆ ಈಗಾಗಲೇ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ಪಶ್ಚಿಮ) ಇವರು ನೀಡಿರುವ **"ಬಿ"** ವಹಿಯಲ್ಲಿ ವಾಹನ ಸಂಖ್ಯೆ: ಸಿಎಎ–3940 ಗೆ ಸಂಬಂಧಿಸಿದಂತೆ ಶ್ರೀ ಅಸ್ಲಮ್ ಖಾನ್ ಬಿನ್ ಅಹಮದ್ ಖಾನ್, ನಂ.1, 1ನೇ ಕ್ರಾಸ್, ಒಟಿಸಿ ರಸ್ತೆ, ಬೆಂಗಳೂರು–53, ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:27.09.2008ರಂದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರನ್ವಯ ಕಾರಣ ಕೇಳುವ ನೋಟೀಸ್ ನೀಡಲಾಗಿತ್ತು.

ಕಾರಣ ಕೇಳುವ ನೋಟಿಸ್ ವಾಹನದ ಮಾಲೀಕರು ಮೇಲ್ಕಂಡ ವಿಳಾಸದಲ್ಲಿ ಲಭ್ಯವಿರದ ಕಾರಣ ಹಿಂತಿರುಗಿ ಬಂದಿರುತ್ತದೆ. ಇದುವರೆವಿಗೂ ವಾಹನದ ಬಿಡುಗಡೆಗೆ ಕೋರಿ ಯಾರು ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಲಗೇಜ್ ಆಟೋ ಸಂಖ್ಯೆ: ಸಿಎಎ–3940 ವಾಹನದಲ್ಲಿ ದಿನಾಂಕ:03.10.2007ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತುಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಹಾಗೂ ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಅದರ ಬಿಡಿ ಭಾಗಗಳು ತುಕ್ಕು ಹಿಡಿದು ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/58/2007–08, ದಿನಾಂಕ:24ನೇ ಫೆಬ್ರವರಿ, 2009**

ಡಾ: ವೈ. ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಮದ್ದೂರು ತಾಲ್ಲೂಕು ಇವರ ಪ್ರ.ಮಾ.ವ ಸಂಖ್ಯೆ: 10/2007–08, ದಿನಾಂಕ:03.10.2007ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಲಗೇಜ್ ಆಟೋ ಸಂಖ್ಯೆ: ಸಿಎಎ–3940 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:24.02.2009ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್
ಪಿ.ಆರ್.213 ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ ಡಿಟಿಸಿಆರ್/188/2007–08, ದಿನಾಂಕ:24ನೇ ಫೆಬ್ರವರಿ, 2009**

**ಅಬಕಾರಿ ನಿರೀಕ್ಷಕರು, ಮದ್ದೂರು ವಲಯ, ಮದ್ದೂರು ತಾಲ್ಲೂಕು ಇವರ ಪ್ರ.ಮಾ.ವ.ಸಂ: 22/2007–08, ದಿನಾಂಕ:05.05.2008**

| **ಫಿರ್ಯಾದುದಾರರು** | **ಆರೋಪಿ** |
|---|---|
| ಅಬಕಾರಿ ನಿರೀಕ್ಷಕರು, ಮದ್ದೂರು ವಲಯ, ಮದ್ದೂರು. | 1) ಕೃಷ್ಣ ಬಿನ್ ಚನ್ನಯ್ಯ, 25 ವಯಸ್ಸು, ಒಕ್ಕಲಿಗ ಜನಾಂಗ, ವ್ಯವಸಾಯ ಕಸುಬು, ಕೆಸ್ತೂರು ಗ್ರಾಮ, ಆತಗೂರು ಹೋಬಳಿ, ಮದ್ದೂರು ತಾಲ್ಲೂಕು.<br>2) ಕೃಷ್ಣ ಬಿನ್ ಮರೀಗೌಡ 25 ವಯಸ್ಸು, ಒಕ್ಕಲಿಗ ಜನಾಂಗ, ವ್ಯವಸಾಯ ಕಸುಬು, ಚಾಮಲಾಪುರ ಗ್ರಾಮ, ಆತಗೂರು ಹೋಬಳಿ, ಮದ್ದೂರು ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:05.05.2008ರಂದು ಬೆಳಿಗ್ಗೆ 07.00 ಗಂಟೆ ಸಮಯದಲ್ಲಿ ಮದ್ದೂರು ತಾಲ್ಲೂಕು, ಆತಗೂರು ಹೋಬಳಿ, ಕೆಸ್ತೂರು ಗ್ರಾಮದ ಪೆಟ್ರೋಲ್ ಬಂಕ್‌ನ ಮುಂಭಾಗದ ರಸ್ತೆಯಲ್ಲಿ ಅಕ್ರಮವಾಗಿ 17.280 ಲೀ ಮದ್ಯವನ್ನು ಸುಜುಕಿ ಮ್ಯಾಕ್ಸ್ 100 ಸಂಖ್ಯೆ: ಕೆಎ–02–ಇಸಿ–4326 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಫಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11 ಮತ್ತು 14ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 32, 34, 38(ಎ), 43 ಮತ್ತು 43(ಎ) ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಹಾಗೂ ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತುಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ. ಸಂಖ್ಯೆ: 22/2007–08 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡುಬಂದಿದ್ದು ಅವು ಮಾನವನ ಸೇವನೆಗೆ ಯೋಗ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ, ಸದರಿ

ವಾಹನ ಹಾಗೂ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:06.06.2008 ಮತ್ತು 18.08.2008ರ ಪತ್ರಗಳ ಮೂಲಕ ಕೋರಿರುತ್ತಾರೆ.

ಅದರಂತೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡವಳಿಗಳನ್ನು ಕೈಗೊಂಡಿದ್ದು, ಮದ್ಯವನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:17.06.2008ರಂದು ಸರ್ಕಾರಕ್ಕೆ ಈಗಾಗಲೇ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ಪಶ್ಚಿಮ) ಇವರು ನೀಡಿರುವ "ಬಿ" ವಹಿಯಲ್ಲಿ ವಾಹನ ಸಂಖ್ಯೆ: ಕೆಎ–02–ಇಸಿ–4326 ಗೆ ಸಂಬಂಧಿಸಿದಂತೆ ಶ್ರೀ ಅಯ್ಯಸ್ವಾಮಿ ಬಿನ್ ಕರಿಮುಸ್ವಾಮಿ, ನಂ.10, 4ನೇ ಕ್ರಾಸ್, ಎಸ್.ಆರ್.ಪುರಂ, ಬೆಂಗಳೂರು–21, ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:07.10.2008ರಂದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರನ್ವಯ ಕಾರಣ ಕೇಳುವ ನೋಟೀಸ್ ನೀಡಲಾಗಿತ್ತು.

ಕಾರಣ ಕೇಳುವ ನೋಟೀಸ್ ವಾಹನದ ಮಾಲೀಕರು ಮೇಲ್ಕಂಡ ವಿಳಾಸದಲ್ಲಿ ಲಭ್ಯವಿರದ ಕಾರಣ ಹಿಂತಿರುಗಿ ಬಂದಿರುತ್ತದೆ. ಇದುವರೆವಿಗೂ ವಾಹನದ ಬಿಡುಗಡೆಗೆ ಕೋರಿ ಯಾರು ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಸುಜುಕಿ ಮ್ಯಾಕ್ಸ್ 100 ಸಂಖ್ಯೆ: ಕೆಎ–02–/ಇಸಿ–4326 ವಾಹನದಲ್ಲಿ ದಿನಾಂಕ:05.05.2008ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತುಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಹಾಗೂ ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಅದರ ಬಿಡಿ ಭಾಗಗಳು ತುಕ್ಕು ಹಿಡಿದು ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/188/2007–08, ದಿನಾಂಕ:24ನೇ ಫೆಬ್ರವರಿ, 2009**

ಡಾ: ವೈ. ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ಜಾರಿ ಮತ್ತು ತನಿಖೆ, ಮದ್ದೂರು ತಾಲ್ಲೂಕು ಇವರ ಪ್ರ.ಮಾ.ವ ಸಂಖ್ಯೆ: 22/2007–08, ದಿನಾಂಕ:05.05.2008ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಸುಜುಕಿ ಮ್ಯಾಕ್ಸ್ 100 ಸಂಖ್ಯೆ: ಕೆಎ–02/ಇಸಿ–4326 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:24.02.2009ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.214

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಡಿಟಿಸಿಆರ್/43/2007–08, ದಿನಾಂಕ:3ನೇ ಮಾರ್ಚ್, 2009**

**ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರ ಪ್ರ.ಮಾ.ವ.ಸಂ: 02/2007–08, ದಿನಾಂಕ:29.08.2007**

| **ಫಿರ್ಯಾದುದಾರರು** | **ಆರೋಪಿ** |
|---|---|
| ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ. | ತಲೆಮರೆಸಿಕೊಂಡಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:29.08.2007ರಂದು ಮಧ್ಯಾಹ್ನ 01.30 ಗಂಟೆ ಸಮಯದಲ್ಲಿ ಮಂಡ್ಯ ಸಿಟಿ, ಮೈಸೂರು–ಬೆಂಗಳೂರು ಮುಖ್ಯರಸ್ತೆಯಿಂದ ಚೀರನಹಳ್ಳಿ ಗ್ರಾಮಕ್ಕೆ ಹೋಗುವ ರಸ್ತೆಯ ತಿರುವಿನ ಎಡಭಾಗಕ್ಕೆ ಇರುವ ಸರ್ವೆ ನಂ.822/3ರ ಜಾಗದಲ್ಲಿರುವ ಗ್ಯಾರೇಜ್‌ನ ಆವರಣದಲ್ಲಿ ಅಕ್ರಮವಾಗಿ 803.520 ಲೀ. ನಕಲಿ ಮದ್ಯವನ್ನು (ಇದರಲ್ಲಿ 656.640 ಲೀ ಹೊರರಾಜ್ಯದ ಮದ್ಯ) ಮೆಟಡೋರ್ ಸಂಖ್ಯೆ: ಕೆಎ–11/726 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಫಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11 ಮತ್ತು 14ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 32, 34, 38(ಎ), 43 ಮತ್ತು 43(ಎ) ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಹಾಗೂ ಮದ್ಯವನ್ನು

ಪಂಚನಾಮೆಯಡಿಯಲ್ಲಿ ಅಮಾನತ್ತುಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ. ಸಂಖ್ಯೆ: 02/2007–08 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡುಬಂದಿದ್ದು ಅವು ಭಾರತದ ಮಾನಕ ಬ್ಯೂರೋಗೆ ಅನುಗುಣವಾಗಿರುವುದಿಲ್ಲ ಮತ್ತು ನಕಲಿ ಮದ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ, ವಾಹನ ಹಾಗೂ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:19.11.2007ರ ಪತ್ರದ ಮೂಲಕ ಕೋರಿರುತ್ತಾರೆ.

ಅದರಂತೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡವಳಿಗಳನ್ನು ಕೈಗೊಂಡಿದ್ದು, ಮದ್ಯವನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:19.11.2007ರಂದು ಸರ್ಕಾರಕ್ಕೆ ಈಗಾಗಲೇ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ವಾಹನಕ್ಕೆ ಸಂಬಂಧಪಟ್ಟಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಡ್ಯ ಇವರು ನೀಡಿರುವ **"ಬಿ"** ವಹಿಯಲ್ಲಿ ವಾಹನ ಸಂಖ್ಯೆ: ಕೆಎ–11/726 ಗೆ ಸಂಬಂಧಿಸಿದಂತೆ ಶ್ರೀ ನಯಾಝ್‌ಪಾಷಾ ಬಿನ್ ಚೋಟಾಸಾಬ್, ಮನೆ ನಂ.2426, ತಾವರೆಗೆರೆ, ಮಂಡ್ಯ ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:19.11.2007 ಮತ್ತು 27.09.2008ರಂದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೋಂದಣಿ ಅಂಚೆ ಮೂಲಕ ಹಾಗೂ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರ ಮುಖಾಂತರ ಜಾರಿ ಮಾಡಿಸಲಾಗಿತ್ತು.

ಕಾರಣ ಕೇಳುವ ನೋಟೀಸ್ ವಾಹನದ ಮಾಲೀಕರು ಮೇಲ್ಕಂಡ ವಿಳಾಸದಲ್ಲಿ ಲಭ್ಯವಿರದ ಕಾರಣ ಹಿಂತಿರುಗಿ ಬಂದಿರುತ್ತದೆ. ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರು ದಿನಾಂಕ:21.01.2009ರ ಪತ್ರದ ಮೂಲಕ ವಾಹನದ ಮಾಲೀಕರು ಮೇಲ್ಕಂಡ ವಿಳಾಸದಲ್ಲಿ ವಾಸವಾಗಿರುವುದಿಲ್ಲವೆಂದು ತಿಳಿದುಬಂದಿರುವುದಾಗಿ ತಿಳಿಸಿ ಈ ಬಗ್ಗೆ ಜರುಗಿಸಿದ ಸ್ಥಳ ಮಹಜರನ್ನು ಸಲ್ಲಿಸಿರುತ್ತಾರೆ. ಇದುವರೆವಿಗೂ ವಾಹನದ ಬಿಡುಗಡೆಗೆ ಕೋರಿ ಯಾರು ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಮೆಟಡೋರ್ ಸಂಖ್ಯೆ:ಕೆಎ–11/726 ವಾಹನದಲ್ಲಿ ದಿನಾಂಕ:29.08.2007ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತುಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಹಾಗೂ ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಅದರ ಬಿಡಿ ಭಾಗಗಳು ತುಕ್ಕು ಹಿಡಿದು ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಸಂಭವವಿರುವುದರಿಂದ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/43/2007–08, ದಿನಾಂಕ:3ನೇ ಮಾರ್ಚ್, 2009**

ಡಾ: ವೈ. ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರ ಪ್ರ.ಮಾ.ವ ಸಂಖ್ಯೆ:02/2007–08, ದಿನಾಂಕ:29.08.2007ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಮೆಟಡೋರ್ ಸಂಖ್ಯೆ: ಕೆಎ–11/726 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:03.03.2009ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.215

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ ಡಿಟಿಸಿಆರ್/54/2007–08, ದಿನಾಂಕ:3ನೇ ಮಾರ್ಚ್, 2009**

**ಅಬಕಾರಿ ಉಪನಿರೀಕ್ಷಕರು, ಜಾರಿ ಮತ್ತು ತನಿಖೆ, ಮಳವಳ್ಳಿ ತಾಲ್ಲೂಕು ಇವರ ಪ್ರ.ಮಾ.ವ.ಸಂ: 07/2007–08, ದಿನಾಂಕ:24.09.2007**

| ಫಿರ್ಯಾದುದಾರರು | ಆರೋಪಿ |
|---|---|
| ಅಬಕಾರಿ ಉಪನಿರೀಕ್ಷಕರು, ಜಾರಿ ಮತ್ತು ತನಿಖೆ, ಮಳವಳ್ಳಿ ತಾಲ್ಲೂಕು. | ತಲೆಮರೆಸಿಕೊಂಡಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:24.09.2007ರಂದು ರಾತ್ರಿ 11–40 ಗಂಟೆ ಸಮಯದಲ್ಲಿ ಮಳವಳ್ಳಿ ತಾಲ್ಲೂಕು, ಕಿರುಗಾವಲು ಹೋಬಳಿ, ಹಿಟ್ಟನಹಳ್ಳಿ, ಕೊಪ್ಪಲು ಗ್ರಾಮದ ಹತ್ತಿರ ಚಾನಲ್ ರಸ್ತೆಯ ಮೇಲೆ ಅಕ್ರಮವಾಗಿ 17.280 ಲೀ. ನಕಲಿ ಮದ್ಯವನ್ನು ಹೀರೋಹೋಂಡಾ ಸಿ.ಡಿ.100 ಬೈಕ್ ಸಂಖ್ಯೆ: ಕೆಎ–11/ಇ–8140 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಫಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, 13(ಎಫ್) ಮತ್ತು 14ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 32, 38(ಎ), 43 ಮತ್ತು 43(ಎ) ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಹಾಗೂ ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತುಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ. ಸಂಖ್ಯೆ: 07/2007–08 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡುಬಂದಿದ್ದು ಅವು ಭಾರತದ ಮಾನಕ ಬ್ಯೂರೋಗೆ ಅನುಗುಣವಾಗಿರುವುದಿಲ್ಲ ಮತ್ತು ನಕಲಿ ಮದ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ, ವಾಹನ ಹಾಗೂ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:19.10.2007 ಮತ್ತು 14.01.2008ರ ಪತ್ರಗಳ ಮೂಲಕ ಕೋರಿರುತ್ತಾರೆ.

ಅದರಂತೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡವಳಿಗಳನ್ನು ಕೈಗೊಂಡಿದ್ದು, ಮದ್ಯವನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:23.10.2007ರಂದು ಸರ್ಕಾರಕ್ಕೆ ಈಗಾಗಲೇ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ವಾಹನಕ್ಕೆ ಸಂಬಂಧಪಟ್ಟಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಡ್ಯ ಇವರು ನೀಡಿರುವ "ಬಿ" ವಹಿಯಲ್ಲಿ ವಾಹನ ಸಂಖ್ಯೆ: ಕೆಎ–11/ಇ–8140 ಗೆ ಸಂಬಂಧಿಸಿದಂತೆ ಶ್ರೀ ಸೋಮೇಗೌಡ ಬಿನ್ ಬಸವೇಗೌಡ, ಚೊಟ್ಟನಹಳ್ಳಿ, ಕೊಣಸಾಲೆ ಅಂಚೆ, ಮದ್ದೂರು ತಾಲ್ಲೂಕು ಮಂಡ್ಯ ಜಿಲ್ಲೆ, ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:29.01.2008 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೀಡಿ ಅಬಕಾರಿ ನಿರೀಕ್ಷಕರು, ಮಳವಳ್ಳಿ ವಲಯ, ಮಳವಳ್ಳಿ ಇವರ ಮುಖಾಂತರ ಜಾರಿ ಮಾಡಿಸಲಾಗಿತ್ತು.

ಶ್ರೀ ಸೋಮೇಗೌಡ ಬಿನ್ ಬಸವೇಗೌಡ, ಚೊಟ್ಟನಹಳ್ಳಿ, ಕೊಣಸಾಲೆ ಅಂಚೆ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ ಇವರು ದಿನಾಂಕ:26.06.2008ರ ಪತ್ರದ ಮೂಲಕ ಮೇಲ್ಕಂಡ ವಾಹನವನ್ನು ಶ್ರೀ ಸಾಕಯ್ಯ ಬಿನ್ ಕೆಂಪೇಗೌಡ, ಕೋಣಸಾಲೆ ಗ್ರಾಮ, ಕೊಪ್ಪ ಹೋಬಳಿ, ಮದ್ದೂರು ತಾಲ್ಲೂಕು ಇವರಿಗೆ ಮಾರಾಟ ಮಾಡಿರುವುದಾಗಿ ತಿಳಿಸಿರುತ್ತಾರೆ, ಈ ಬಗ್ಗೆ ಯಾವುದೇ ದಾಖಲಾತಿಗಳನ್ನು ಸಲ್ಲಿಸಿರುವುದಿಲ್ಲ ಹಾಗೂ ವಾಹನದ ಬಗ್ಗೆ ಕಾನೂನು ರೀತ್ಯಾ ಕ್ರಮ ಕೈಗೊಳ್ಳಲು ತಕರಾರು ಏನು ಇಲ್ಲವೆಂದು ತಿಳಿಸಿರುತ್ತಾರೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಹೀರೋ ಹೋಂಡಾ ಸಿ.ಡಿ.–100 ಬೈಕ್ ಸಂಖ್ಯೆ:ಕೆಎ–11/ಇ–8140 ವಾಹನದಲ್ಲಿ ದಿನಾಂಕ:24.09.2007ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತುಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಹಾಗೂ ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಅದರ ಬಿಡಿ ಭಾಗಗಳು ತುಕ್ಕು ಹಿಡಿದು ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/54/2007–08, ದಿನಾಂಕ:3ನೇ ಮಾರ್ಚ್, 2009**

ಡಾ: ವೈ. ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪನಿರೀಕ್ಷಕರು, ಜಾರಿ ಮತ್ತು ತನಿಖೆ, ಮಳವಳ್ಳಿ ತಾಲ್ಲೂಕು, ಇವರ ಪ್ರ.ಮಾ.ವ ಸಂಖ್ಯೆ:07/2007–08,

ದಿನಾಂಕ:24.09.2007ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಹೀರೋ ಹೋಂಡಾ ಸಿ.ಡಿ.–100 ಬೈಕ್ ಸಂಖ್ಯೆ: ಕೆಎ–11/ಇ–8140 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:03.03.2009ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್
ಪಿ.ಆರ್.216 ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಡಿಟಿಸಿಆರ್/185/2007–08, ದಿನಾಂಕ:3ನೇ ಮಾರ್ಚ್, 2009**

**ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಮಳವಳ್ಳಿ ತಾಲ್ಲೂಕು ಇವರ ಪ್ರ.ಮಾ.ವ.ಸಂ: 33/2007–08, ದಿನಾಂಕ:05.05.2008**

| **ಫಿರ್ಯಾದುದಾರರು** | **ಆರೋಪಿ** |
|---|---|
| ಅಬಕಾರಿ ಉಪನಿರೀಕ್ಷಕರು, ಜಾರಿ ಮತ್ತು ತನಿಖೆ, ಮಳವಳ್ಳಿ ತಾಲ್ಲೂಕು. | 1) ರಾಜು ಬಿನ್ ದೊಡ್ಡತಮ್ಮಯ್ಯ, 32 ವರ್ಷ, ಒಕ್ಕಲಿಗ ಜನಾಂಗ, ಪೆಟ್ಟಿ ಅಂಗಡಿ ವ್ಯಾಪಾರ, ಕೋಡಿಪುರ ಗ್ರಾಮ, ಕಸಬಾ ಹೋಬಳಿ, ಮಳವಳ್ಳಿ ತಾಲ್ಲೂಕು.<br>2) ಶಿವಣ್ಣ ಬಿನ್ ಚಿಕ್ಕದ್ಯೆಗೌಡ, 42 ವರ್ಷ, ಒಕ್ಕಲಿಗ ಜನಾಂಗ, ವ್ಯವಸಾಯ, ಕೋಡಿಪುರ ಗ್ರಾಮ, ಕಸಬಾ ಹೋಬಳಿ, ಮಳವಳ್ಳಿ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:05.05.2008ರಂದು ಬೆಳಿಗ್ಗೆ 09–45 ಗಂಟೆ ಸಮಯದಲ್ಲಿ ಮಳವಳ್ಳಿ ತಾಲ್ಲೂಕು, ಮಳವಳ್ಳಿ–ಹಲಗೂರು ಮುಖ್ಯರಸ್ತೆಯ ಬಸವನಪುರ ಗ್ರಾಮಕ್ಕೆ ಹೋಗುವ ತಿರುವಿನಲ್ಲಿ ಅಕ್ರಮವಾಗಿ 14.760 ಲೀ. ಮದ್ಯವನ್ನು ಹೀರೋಹೋಂಡಾ ಬೈಕ್ ಸಂಖ್ಯೆ: ಕೆಎ–09/ಎಸ್–9174 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಫಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, 14ರ ರೀತ್ಯ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 32, 43 ಮತ್ತು 43(ಎ) ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಹಾಗೂ ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತುಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ. ಸಂಖ್ಯೆ: 33/2007–08 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡುಬಂದಿದ್ದು ಅವು ಮಾನವನ ಸೇವನೆಗೆ ಯೋಗ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ, ವಾಹನ ಹಾಗೂ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:26.08.2008ರ ಪತ್ರದ ಮೂಲಕ ಕೋರಿರುತ್ತಾರೆ.

ಅದರಂತೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡವಳಿಗಳನ್ನು ಕೈಗೊಂಡಿದ್ದು, ಮದ್ಯವನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:06.10.2008ರಂದು ಸರ್ಕಾರಕ್ಕೆ ಈಗಾಗಲೇ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮೈಸೂರು ಇವರು ನೀಡಿರುವ "ಬಿ" ವಹಿಯಲ್ಲಿ ವಾಹನ ಸಂಖ್ಯೆ: ಕೆಎ–09/ಎಸ್–9174 ಗೆ ಸಂಬಂಧಿಸಿದಂತೆ ಶ್ರೀ ಟಿ.ಎನ್. ರಾಮಸ್ವಾಮಿ ಬಿನ್ ನಂಜುಂಡೇಗೌಡ, ನಂ.146, ತುರುಗನೂರು ಗ್ರಾಮ, ಟಿ.ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ, ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:22.07.2008 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೀಡಿ ಅಬಕಾರಿ ನಿರೀಕ್ಷಕರು, ಮಳವಳ್ಳಿ ವಲಯ, ಮಳವಳ್ಳಿ ಇವರ ಮುಖಾಂತರ ಜಾರಿ ಮಾಡಿಸಲಾಗಿತ್ತು.

ಶ್ರೀ ಟಿ.ಎನ್. ರಾಮಸ್ವಾಮಿ ಬಿನ್ ನಂಜುಂಡೇಗೌಡ, ನಂ.146, ತುರುಗನೂರು ಗ್ರಾಮ, ಟಿ.ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ, ಇವರು ದಿನಾಂಕ:22.08.2008 ಮತ್ತು 28.08.2008ರ ಪತ್ರಗಳ ಮೂಲಕ ಮೇಲ್ಕಂಡ ವಾಹನವನ್ನು ಶ್ರೀ ನಾಗೇಗೌಡ ಬಿನ್ ಸುಬ್ಬೇಗೌಡ, ಕೇಶುಪುರ ಗ್ರಾಮ, ಇವರಿಗೆ ಮಾರಾಟ ಮಾಡಿರುವುದಾಗಿ ತಿಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಶ್ರೀ ನಾಗೇಗೌಡ ಬಿನ್ ಸುಬ್ಬೇಗೌಡ ಇವರಿಗೂ ಸಹ ದಿನಾಂಕ:27.09.2008ರಂದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರನ್ವಯ ಕಾರಣ ಕೇಳುವ ನೋಟೀಸನ್ನು ನೊಂದಣಿ ಅಂಚೆ ಮೂಲಕ ನೀಡಲಾಗಿತ್ತು.

ಕಾರಣ ಕೇಳುವ ನೋಟೀಸ್ ಶ್ರೀ ನಾಗೇಗೌಡ ಬಿನ್ ಸುಬ್ಬೇಗೌಡ ಇವರು ಮೇಲ್ಕಂಡ ವಿಳಾಸದಲ್ಲಿ ಲಭ್ಯವಿರದ ಕಾರಣ ಹಿಂತಿರುಗಿ ಬಂದಿರುತ್ತದೆ. ಇದುವರೆವಿಗೂ ವಾಹನದ ಬಿಡುಗಡೆಗೆ ಕೋರಿ ಯಾರು ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಹೀರೋ ಹೋಂಡಾ ಬೈಕ್ ಸಂಖ್ಯೆ:ಕೆಎ–09/ಎಸ್–9174 ವಾಹನದಲ್ಲಿ ದಿನಾಂಕ:05.05.2008ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತುಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಹಾಗೂ ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಅದರ ಬಿಡಿ ಭಾಗಗಳು ತುಕ್ಕು ಹಿಡಿದು ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/185/2007–08, ದಿನಾಂಕ:3ನೇ ಮಾರ್ಚ್, 2009**

ಡಾ: ವೈ. ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪನಿರೀಕ್ಷಕರು, ಜಾರಿ ಮತ್ತು ತನಿಖೆ, ಮಳವಳ್ಳಿ ತಾಲ್ಲೂಕು, ಇವರ ಪ್ರ.ಮಾ.ವ ಸಂಖ್ಯೆ:33/2007–08, ದಿನಾಂಕ:05.05.2008ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಹೀರೋ ಹೋಂಡಾ ಬೈಕ್ ಸಂಖ್ಯೆ: ಕೆಎ–09/ಎಸ್–9174 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:03.03.2009ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.217

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ

## ಕಾರ್ಯನಿರ್ವಾಹಕ ಇಂಜಿನಿಯರ್ (ವಿದ್ಯುತ್) ರವರ ಕಛೇರಿ, ಬೃಹತ್ ಕಾಮಗಾರಿ ವಿಭಾಗ, ಉಡುಪಿ, ಕವಿಪ್ರನಿನಿ., ಕಾವೂರು, ಮಂಗಳೂರು

### ತಿದ್ದುಪಡಿ ಪ್ರಕಟಣೆ

**ಸಂಖ್ಯೆ: ಕಾನಿಇಂ/ಬೃಕಾವಿ/ಉಡುಪಿ/ಸಕಾನಿಇಂ(ಕ)/1130, ದಿನಾಂಕ:10ನೇ ಜೂನ್, 2009**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು, 2003ರ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮದ ಸೆಕ್ಷನ್ 67(2)(ಸಿ)ರ ಅನ್ವಯ ಈ ಕೆಳಕಂಡ ಯೋಜನೆಯನ್ನು ರೂಪಿಸಿರುತ್ತದೆ ಮತ್ತು ಅದನ್ನು ಮೇಲೆ ತಿಳಿಸಿರುವ ಕಾಯ್ದೆಯ ಸೆಕ್ಷನ್ 67(2)ರ ಅನ್ವಯ ಸಂಬಂಧಪಟ್ಟ ವ್ಯಕ್ತಿಗಳ ಮಾಹಿತಿಗಾಗಿ ಈ ಮೊದಲೇ ದಿನಾಂಕ:22.08.2007ರ ಉದಯವಾಣಿ ದಿನಪತ್ರಿಕೆಯಲ್ಲಿ ಪ್ರಕಟಿಸಲಾಗಿತ್ತು. ಭಾರತೀಯ ವಿಮಾನಯಾನ ಪ್ರಾಧಿಕಾರವು ದಿನಾಂಕ:06.05.2009ರಂದು ಈ ಯೋಜನೆಗೆ ತನ್ನ ನಿರಾಪೇಕ್ಷಣಾ ಪತ್ರವನ್ನು ನೀಡಿದ್ದು, ಆ ಪ್ರಕಾರ ಸದ್ರಿ ಯೋಜನೆಯ ಹೆಸರಿನಲ್ಲಿ ಈ ಕೆಳಗಿನಂತೆ ತಿದ್ದುಪಡಿಗಳನ್ನು ಮಾಡಿ ಸಾರ್ವಜನಿಕ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ. ಯೋಜನೆಯ ವಿವರಗಳು ಈ ಕೆಳಕಂಡಂತಿವೆ.

| | | |
|---|---|---|
| 1. | ಯೋಜನೆಯ ಹೆಸರು: | ವರಾಹಿಯಿಂದ ಕೇಮಾರ್, ಕೇಮಾರ್‌ನಿಂದ ಗಂಜೀಮಠದವರೆಗೆ ಮತ್ತು ಗುರುಪುರದಿಂದ ವಾಮಂಜೂರಿನವರೆಗೆ ಹಾಲಿ ಇರುವ 110 ಕೆವಿ ಶಿವಮೊಗ್ಗ– ಕಾವೂರು ಏಕ ಪ್ರಸರಣ ವಿದ್ಯುತ್ ಮಾರ್ಗದಲ್ಲಿಯೇ ಹಾಗೂ ಗಂಜೀಮಠದಿಂದ ಗುರುಪುರದವರೆಗೆ ಹೊಸ ಪಥದಲ್ಲಿ 220 ಕೆವಿ ದ್ವಿಪ್ರಸರಣಾ ವಿದ್ಯುತ್ ಮಾರ್ಗದ ನಿರ್ಮಾಣ ಮತ್ತು ವಾಮಂಜೂರಿನಿಂದ ಕಾವೂರಿನವರೆಗೆ ಹಾಲಿ ಇರುವ 110 ಕೆವಿ ಶಿವಮೊಗ್ಗ–ಕಾವೂರು ಏಕ ಪ್ರಸರಣಾ ವಿದ್ಯುತ್ ಮಾರ್ಗದಲ್ಲಿಯೇ 220/110 ಕೆವಿ ಬಹುಮಂಡಲ ವಿದ್ಯುತ್ ಪ್ರಸರಣಾ ಮಾರ್ಗದ ನಿರ್ಮಾಣ. |
| 2. | ಪ್ರಮುಖ ಲಕ್ಷಣಗಳು | ಸಾಂಪ್ರದಾಯಿಕವಾದ ಜಿ.ಐ. ಲ್ಯಾಟೀಸ್ ಮಾದರಿಯ ಗೋಪುರಗಳ ಮೇಲೆ ಮೂಸ್ ವಾಹಕವನ್ನು ಉಪಯೋಗಿಸಿ, ಸುಮಾರು 112 ಕಿ.ಮೀ. ಉದ್ದದ 220 ಕೆ.ವಿ. ದ್ವಿ ಪ್ರಸರಣಾ ವಿದ್ಯುತ್ ಮಾರ್ಗದ ನಿರ್ಮಾಣ ಹಾಗೂ ಆ ನಂತರ ಸುಮಾರು 5.0 ಕಿ.ಮೀ. ಉದ್ದದ ಬಹುಮಂಡಲ ವಿದ್ಯುತ್ ಪ್ರಸರಣಾ ಮಾರ್ಗದ ನಿರ್ಮಾಣ. |

| | | |
|---|---|---|
| 3. | ಹಾದು ಹೋಗುವ ಪ್ರದೇಶಗಳು | ಉಡುಪಿ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಹಾಗೂ ಸುತ್ತಮುತ್ತಲಿನ ಪ್ರದೇಶಗಳಿಗೆ ಉತ್ತಮ ಗುಣಮಟ್ಟದ ಮತ್ತು ನಿರಂತರ ವಿದ್ಯುತ್ ಸರಬರಾಜಿನೊಂದಿಗೆ ಬೆಳೆಯುತ್ತಿರುವ ವಿದ್ಯುತ್ ಬೇಡಿಕೆಯನ್ನು ಪೂರೈಸುವ ಸಲುವಾಗಿ ಕೈಗೊಳ್ಳಲಾದ ಈ ಪ್ರಸ್ತಾವಿತ ವಿದ್ಯುತ್ ಮಾರ್ಗವು 35 ಮೀಟರ್ ಕಾರಿಡಾರ್ ಅಗಲವನ್ನು ಹೊಂದಿದ್ದು, ಉಡುಪಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಈ ಕೆಳಗಿನ ಪ್ರದೇಶಗಳಲ್ಲಿ ಹಾದುಹೋಗುತ್ತದೆ. ಪ್ರಸ್ತಾವಿತ ವಿದ್ಯುತ್ ಪ್ರಸರಣಾ ಮಾರ್ಗವು ಹುಲಿಕಲ್, ಮುತ್ತಿಟ್ಟಿನಕಟ್ಟೆ, ಹೊಸಂಗಡಿ, ಕೆರಕಟ್ಟೆ, ಸಿದ್ದಾಪುರ, ಐರುಬೈಲು, ಉಳ್ಳೂರು, ಹೆಬ್ಬಾಡಿ, ಶಂಕರನಾರಾಯಣ, ಕೊಳಂಜೆ, ಹಾಲಾಡಿ, ಕಕ್ಕುಂಜೆ, ವಂಡಾರು, ಶಿರೂರು, ಕೊಟ್ಟಂಬೈಲು, ಕೊಕ್ಕರ್ಣೆ, ಗುಂಡಿಬೈಲು, ಕುಡುಂಗೋಡು, ಕರ್ಜೆ, ಬಲೆಬೈಲು, ಬುಕ್ಕಿಗುಡ್ಡೆ, ಹಿರಿಯಡ್ಕ, ಬೊಮ್ಮಾರ್‌ಬೆಟ್ಟು, ಗುಡ್ಡೆಅಂಗಡಿ, ಪಂಚನಬೆಟ್ಟು, ನೀರೆ, ಬೈಲೂರು, ಜಾರ್ಕಳ, ಕಲ್ಕಂಬ, ಕುಕ್ಕೂಂದೂರು, ನಕ್ರೆ, ಕಾರ್ಕಳ, ಕಾಬೆಟ್ಟು ಅತ್ತೂರು, ಪರ್ಪಲೆಗುಡ್ಡೆ, ಕೇಮಾರ್, ಕುಂಟಲ್ಪಾಡಿ, ಸಾಣೂರು, ಕಾಂತಾವರ, ಬೆಳುವಾಯಿ, ಮೂಡಬಿದ್ರೆ, ನಡಿಗುಡ್ಡೆ, ಪುತ್ತಿಗೆ, ಸಂಪಿಗೆ, ಬಡಮಿಜಾರ್, ತೋಡಾರ್, ಮಿಜಾರ್, ಎಡಪದವು, ಗಂಜಿಮಠ, ನೂಯಿ, ಸೂರ್ಯಪಾಡಿ, ಅಡೂರು, ಮಳಲಿ, ಬಡಗುಉಳಿಪಾಡಿ, ಮಟ್ಟು, ತೆಂಕುಉಲಿಪಾಡಿ, ಮೂಳೂರು, ಮೂಡುಪೆರಾರ್, ಗುರುಕಂಬ್ಳಾ, ಕೈಕಂಬ, ಗುರುಪುರ, ವಾಮಂಜೂರು, ಕೆರ್ಮಾ, ಶಿವನಗರ, ಜವರದಬೆಟ್ಟು, ಪಡುಶೆಡ್ಡೆ ಮೂಲಕ ಹಾದು ಕಾವೂರಿಗೆ ಬಂದು ಅಂತ್ಯಗೊಳ್ಳಲಿದೆ. ಭಾರತೀಯ ವಿಮಾನಯಾನ ಪ್ರಾಧಿಕಾರವು ಗಂಜೀಮಠದಿಂದ ಗುರುಪುರದವರೆಗೆ ಹಾಲಿ ಇರುವ 110 ಕೆವಿ ಶಿವಮೊಗ್ಗ–ಕಾವೂರು ಏಕ ಪ್ರಸರಣಾ ವಿದ್ಯುತ್ ಮಾರ್ಗದಲ್ಲಿಯೇ 220 ಕೆವಿ ದ್ವಿಪ್ರಸರಣಾ ವಿದ್ಯುತ್ ಮಾರ್ಗದ ನಿರ್ಮಾಣಕ್ಕೆ ಸುರಕ್ಷತೆಯ ಕಾರಣಗಳನ್ನು ನೀಡಿ, ಪ್ರಾಧಿಕಾರದ ಪರಿಧಿಯ ಹೊರಗೆ (Outside the Inner Horizontal Surface (IHS) Zone) ಅಂದರೆ ಗಂಜೀಮಠದಿಂದ ಗುರುಪುರದವರೆಗೆ ನೂತನ ಪಥದಲ್ಲಿ 220 ಕೆವಿ ದ್ವಿಪ್ರಸರಣಾ ವಿದ್ಯುತ್ ಮಾರ್ಗವನ್ನು ಕೊಂಡೊಯ್ಯುವಂತೆ ಸೂಚಿಸಿ, ನೂತನ ಪಥದಲ್ಲಿ 220 ಕೆವಿ ದ್ವಿಪ್ರಸರಣಾ ವಿದ್ಯುತ್ ಮಾರ್ಗದ ನಿರ್ಮಾಣ ಕಾಮಗಾರಿಗೆ ತನ್ನ ನಿರಾಪೇಕ್ಷಣಾ ಪತ್ರವನ್ನು ನೀಡಿರುತ್ತದೆ. ಈ ನೂತನ ವಿದ್ಯುತ್ ಮಾರ್ಗವು (Deviated Route Outside the Inner Horizontal Surface (IHS) Zone of Airport Authority of India) ಮೇಲೆ ತಿಳಿಸಿದಂತೆ ಗಂಜೀಮಠದಿಂದ ಮುಂದುವರಿದು ನೂಯಿ, ಸೂರ್ಯಪಾಡಿ, ಅಡೂರು, ಮಳಲಿ, ಬಡಗುಉಳಿಪಾಡಿ, ಮಟ್ಟು, ತೆಂಕುಉಳಿಪಾಡಿ, ಮೂಳೂರು, ಮೂಡುಪೆರಾರ್, ಗುರುಕಂಬ್ಳಾ, ಕೈಕಂಬ ಪ್ರದೇಶಗಳಲ್ಲಿ ಹಾದು ಗುರುಪುರದಲ್ಲಿ ಹಾಲಿ ಇರುವ 110 ಕೆವಿ ಶಿವಮೊಗ್ಗ–ಕಾವೂರು ಏಕ ಪ್ರಸರಣಾ ವಿದ್ಯುತ್ ಮಾರ್ಗದ ಪಥವನ್ನು ಸೇರಿಕೊಳ್ಳುತ್ತದೆ. |
| 4. | ವಿದ್ಯುತ್ ಪ್ರಸರಣ ಮಾರ್ಗದ ಅಂದಾಜು ಮೌಲ್ಯ. | ಸಾಮಗ್ರಿ ಮತ್ತು ಲೇಬರ್ ವೆಚ್ಚ ಸೇರಿಸಿ ಅಂದಾಜು 9458.99 ಲಕ್ಷ ರೂಪಾಯಿಗಳು. |

ಮೇಲೆ ತಿಳಿಸಿರುವ ಯೋಜನೆಯನ್ನು ಕಾರ್ಯಗತಗೊಳಿಸಲು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು, ಭಾರತೀಯ ಟೆಲಿಗ್ರಾಫಿಕ್ ಕಾಯಿದೆ 1885 ಅಧಿನಿಯಮ ಭಾಗ–IIIರ ಅನ್ವಯ ಟೆಲಿಗ್ರಾಫ್ ಪ್ರಾಧಿಕಾರಿಗಳು ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ ಹಾಗೂ ಚಲಾಯಿಸುತ್ತದೆ. ಮೇಲಿನ ಪ್ರಸ್ತಾವಿತ ಯೋಜನೆಯನ್ನು ಶೀಘ್ರವಾಗಿ ಕಾರ್ಯಗತಗೊಳಿಸಿ ಸಾರ್ವಜನಿಕ ಉಪಯೋಗಕ್ಕೆ ಸಮರ್ಪಿಸಲು ಸಮಸ್ತ ನಾಗರೀಕರ ಅಗತ್ಯ ಸಹಕಾರವನ್ನು ವಿದ್ಯುತ್ ಪ್ರಸರಣಾ ನಿಗಮವು ಅಪೇಕ್ಷಿಸುತ್ತದೆ.

ಕಾರ್ಯನಿರ್ವಾಹಕ ಇಂಜಿನಿಯರ್ (ವಿದ್ಯುತ್),
ಬೃಹತ್ ಕಾಮಗಾರಿ ವಿಭಾಗ, ಉಡುಪಿ,
ಕವಿಪ್ರನಿನಿ., ಕಾವೂರು, ಮಂಗಳೂರು.

ಪಿ.ಡಿ.37

**KARNATAKA STATE BAR COUNCIL, OLD K.G.I.D. BLDG., BANGALORE**

**NOTIFICATION No.3/2009, Dated:25th February, 2009**

As per Rule 8 of "The Karnataka State Bar Council (Election of Chairman and Vice Chairman) Rules 1978" it is declared that the following Members of the Council are elected unopposed to the Office of the Chairman and Vice-Chairman.

**CHAIRMAN**

| Sl. No. | Name of the Candidates | Address |
|---|---|---|
| 2. | ABDUL REYAZ KHAN. R. | No.20/22, II Floor, Byatappa Building, Cubbonpet Main Road, Bangalore-2. |

**VICE-CHAIRMAN**

| Sl. No. | Name of the Candidates | Address |
|---|---|---|
| 1. | YOGEESH B.S. | Soudharma, Kuvempu Nagar, I Main, 6th Cross, Behind M.G. Stadium, Tumkur. |

**K. SATHYAMOORTHI HOLLA**
Secretary & Returning Officer.

PD-38

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಆಕುಕ 86 ಹೆಚ್ಎಸ್ಹೆಚ್ 2009(ಭಾಗ–2), ಬೆಂಗಳೂರು, ದಿನಾಂಕ:30ನೇ ಜೂನ್, 2009**

**ÕÝNïö:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸೇವಾನಿರತ ವೈದ್ಯಾಧಿಕಾರಿಗಳನ್ನು 2009–10 ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸುವ ಬಗ್ಗೆ.

**EÑöU:** 1. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಪತ್ರ ಸಂಖ್ಯೆ: ಜೆಆರ್ಒ(ಎಂ) 45/ 2008–09 ದಿನಾಂಕ: 09/06/09 ಮತ್ತು 26/06/2009.

2. ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರುರವರ ಪತ್ರ ಸಂಖ್ಯೆ:ಪಿಜಿಇಟಿ-9/ ಕೌನ್ಸಿಲಿಂಗ್/01–2009–10 ದಿನಾಂಕ:26/06/2009.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸೇವಾನಿರತ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು 2009–10ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಅರ್ಜಿ ಸಲ್ಲಿಸಿ, ಕುಲಸಚಿವರು, ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾನಿಲಯ, ಬೆಂಗಳೂರು ಇವರು ಉಲ್ಲೇಖ-2 ರಲ್ಲಿ ಕೌನ್ಸಿಲಿಂಗ್ ಮೂಲಕ ಆಯ್ಕೆ ಮಾಡಿರುವಂತೆ, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಆಯ್ಕೆ ಪಟ್ಟಿಯೊಂದಿಗೆ ಉಲ್ಲೇಖ-1 ರಲ್ಲಿ ಕಳುಹಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೂಡಲೇ ಜಾರಿಗೆ ಬರುವಂತೆ ಈ ಅಧಿಸೂಚನೆಯ ಅನುಬಂಧದಲ್ಲಿರುವ 102 ವೈದ್ಯಾಧಿಕಾರಿಗಳನ್ನು ಅವರುಗಳ ಹೆಸರಿನ ಮುಂದೆ ನಮೂದಿಸಿರುವ ವಿಷಯ ಮತ್ತು ಕಾಲೇಜುಗಳಿಗೆ ನಿಯೋಜಿಸಲಾಗಿದೆ.

2. ಸಂಬಂಧಿಸಿದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು/ ಜಿಲ್ಲಾ ಶಸ್ತ್ರ ಚಿಕಿತ್ಸಕರು ಮತ್ತು ಸಂಬಂಧಿಸಿದ ಮೇಲಾಧಿಕಾರಿಗಳು ಕರ್ನಾಟಕ ಸರ್ಕಾರಿ ಸೇವಾ ನಿಯಮಗಳಲ್ಲಿ ನಿಗದಿಪಡಿಸಿರುವಂತೆ ಹಾಗೂ ಪ್ರಸ್ತುತ ಜಾರಿಯಲ್ಲಿರುವ ನಿಯಮಗಳಂತೆ ನಮೂನೆ 19 ಮತ್ತು 19-ಎ ಹಾಗೂ ಪೆನಾಲ್ಟಿ ಬಾಂಡ್ ಪಡೆದು ಕೂಡಲೇ ಕರ್ತವ್ಯದಿಂದ ಬಿಡುಗಡೆ ಮಾಡುವ ಬಗ್ಗೆ ಕ್ರಮ ತೆಗೆದುಕೊಳ್ಳುವುದು.

3. ಈ ಅಧಿಸೂಚನೆಯ ಅನುಬಂಧದಲ್ಲಿ ತಿಳಿಸಿರುವ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಸೇವಾನಿರತ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಸ್ನಾತಕೋತ್ತರ ಕೋರ್ಸಿಗೆ ಪ್ರವೇಶ ಪಡೆದ ನಂತರ ವ್ಯಾಸಂಗದ ರಜೆ ಅಥವಾ ಪ್ರತಿನಿಯೋಜನಾ ರಿಯಾಯಿತಿ ಸೌಲಭ್ಯ ಮಂಜೂರಾತಿಗೆ ಸಂಬಂಧಿಸಿದಂತೆ ಸರ್ಕಾರವು ಪ್ರತ್ಯೇಕವಾಗಿ ಪರಿಶೀಲಿಸಿ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸುವ ಬಗ್ಗೆ ಕ್ರಮ ತೆಗೆದುಕೊಳ್ಳಲಾಗುವುದು. ಸ್ನಾತಕೋತ್ತರ ಕೋರ್ಸಿಗೆ ಪ್ರವೇಶ ಪಡೆದ ದಿನಾಂಕದಿಂದ ಜಾರಿಗೆ ಬರುವಂತೆ ಸರ್ಕಾರದ ಮಂಜೂರಾತಿ ಇಲ್ಲದೇ ಈ ಅಭ್ಯರ್ಥಿಗಳು ವೇತನ/ರಜೆಯ ವೇತನ ಪಡೆಯಲು ಅವಕಾಶವಿರುವುದಿಲ್ಲ.

4. 2009–10ನೇ ಸಾಲಿನಲ್ಲಿ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾದ ಈ ಅಧಿಸೂಚನೆಯ ಅನುಬಂಧದಲ್ಲಿ ತಿಳಿಸಿರುವ ಸೇವಾನಿರತ ವೈದ್ಯರು ಸಂಬಂಧಪಟ್ಟ ವೈದ್ಯಕೀಯ ಕಾಲೇಜುಗಳಲ್ಲಿ ಸ್ನಾತಕೋತ್ತರ ಕೋರ್ಸು ಪ್ರಾರಂಭವಾಗುವವರೆಗೆ ಕರ್ತವ್ಯ ನಿರ್ವಹಿಸುತ್ತಿದ್ದ ಸ್ಥಳದಲ್ಲಿ ಮುಂದುವರಿಯುವುದು ಹಾಗೂ ತದನಂತರ ಕರ್ತವ್ಯದಿಂದ ಬಿಡುಗಡೆಗೊಳ್ಳತಕ್ಕದ್ದು. ಸಂಬಂಧಿಸಿದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಹಾಗೂ ಸಂಬಂಧಿಸಿದ ಮೇಲಾಧಿಕಾರಿಗಳು ಅದರಂತೆ ಕ್ರಮತೆಗೆದುಕೊಳ್ಳಬೇಕೆಂದು ಆದೇಶಿಸಲಾಗಿದೆ.

5. ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆಃ ಆಇ 693 ವೆಚ್ಚ-5 : 2008 ದಿನಾಂಕಃ 31–05–2008 ರಲ್ಲಿ 5 ವರ್ಷಕ್ಕಿಂತ ಕಡಿಮೆ ಹಾಗೂ 3 ವರ್ಷ ಮೇಲ್ಪಟ್ಟು ಸರ್ಕಾರಿ ಸೇವೆ ಸಲ್ಲಿಸಿರುವ ಸೇವಾನಿರತ ಸ್ನಾತಕೋತ್ತರ ವ್ಯಾಸಂಗ ನಡೆಸುತ್ತಿರುವ ವೈದ್ಯಾಧಿಕಾರಿಗಳಿಂದ ಪರಿಷ್ಕೃತ ಕರಾರು ಬಂಧ ಪತ್ರವನ್ನು ಪಡೆಯುವ ಷರತ್ತಿಗೊಳಪಟ್ಟು ನೀಡಿರುವ ಸಹಮತಿಯೊಂದಿಗೆ ಹೊರಡಿಸಿದೆ.

6. ಸ್ನಾತಕೋತ್ತರ ವ್ಯಾಸಂಗಕ್ಕೆ ಸಂಬಂಧಿಸಿದಂತೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿ/ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿರುವ ಅರ್ಜಿಯ ಮೇಲಿನ ಅಂತಿಮ ತೀರ್ಮಾನಕ್ಕೆ ಈ ಆದೇಶವು ಒಳಪಟ್ಟಿರುತ್ತದೆ.

ಈ ಅಧಿಸೂಚನೆಯನ್ನು ಸರ್ಕಾರಿ ಆದೇಶ ಸಂಖ್ಯೆಃ ಆಇ 02 ಎಸ್ಆರ್ಎ 2008 ದಿನಾಂಕ:05–06–2008 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1).

**ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 86 ಹೆಚ್ಎಸ್ಹೆಚ್ 2009 (ಭಾಗ–2) ದಿನಾಂಕ: 30/06/2009 ಕ್ಕೆ ಅನುಬಂಧ**

| ಕ್ರ. ಸಂ. | ವೈದ್ಯರ ಹೆಸರು ಮತ್ತು ಕಾರ್ಯನಿರತ ಸ್ಥಳ | ವಿಷಯ | ಆಯ್ಕೆ ಮಾಡಿಕೊಂಡ ವೈದ್ಯಕೀಯ ಕಾಲೇಜಿನ ಹೆಸರು |
|---|---|---|---|
| 1 | ಡಾ: ಪ್ರಶಾಂತ್ ಹೆಚ್.ಕೆ. ಪ್ರಾಆಕೇಂದ್ರ, ಸಾತನೂರು, ಕನಕಪುರ ತಾ: ರಾಮನಗರ ಜಿಲ್ಲೆ | DCH | ಆದಿಚುಂಚನಗಿರಿ ಮೆಡಿಕಲ್ ಕಾಲೇಜ್, ಬೆಳ್ಳೂರು |
| 2 | ಡಾ: ರಂಗಸ್ವಾಮಿ ಹೆಚ್.ವಿ. ಜಿಲ್ಲಾ ಕ್ಷಯರೋಗಯ ನಿಯಂತ್ರಾಣಾಧಿಕಾರಿ ಜಿಲ್ಲಾ ಕ್ಷಯರೋಗ ನಿಯಂತ್ರಣ ಕೇಂದ್ರ, ತುಮಕೂರು | MD Com. Med | ಆದಿಚುಂಚನಗಿರಿ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಕಾಲೇಜ್, ಬೆಳ್ಳೂರು |
| 3 | ಡಾ: ಶ್ರೀಕಾಂತ್ ಎಸ್. ಪ್ರಾಆಕೇ. ಹಾರಮಘಟ್ಟ ಶಿವಮೊಗ್ಗ ಜಿಲ್ಲೆ | MD GM | ಆದಿಚುಂಚನಗಿರಿ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಕಾಲೇಜ್, ಬೆಳ್ಳೂರು |
| 4 | ಡಾ: ಮಂಜುನಾಥ ಪ್ರಸಾದ್, ಪ್ರಾ.ಆ.ಕೇಂದ್ರ, ರಿಪ್ಪನ್‌ಪೇಟೆ, ಶಿವಮೊಗ್ಗ | MS ENT | ಎ.ಜೆ. ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸ್, ಮಂಗಳೂರು |
| 5 | ಡಾ: ಶಶಿಕಲಾ ಎಸ್. ಎಸ್.ಡಿ.ಎಸ್. ಟಿಬಿ ಮತ್ತು ಆರ್.ಜಿ.ಐ.ಸಿ.ಡಿ. ಬೆಂಗಳೂರು | MD Bio Chem | ಎ.ಜೆ. ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸ್, ಮಂಗಳೂರು |
| 6 | ಡಾ: ಬಯಪ್ಪರೆಡ್ಡಿ, ಪ್ರಾ.ಆ.ಕೇಂದ್ರ, ಕೊಡಿಗೇನಹಳ್ಳಿ, ಮಧುಗಿರಿ ತಾ: ತುಮಕೂರು ಜಿಲ್ಲೆ | DMRD | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 7 | ಡಾ: ಭಾರತಿ ಅಂಜಗಿ, ನಿಯೋಜನೆ ಮೇಲೆ, ಕೃ.ಭಾ.ಜ.ನಿಗಮ ನಿಯಮಿತ, ಆಲಮಟ್ಟಿ–586201 | MS OBG | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 8 | ಡಾ: ಹೇಮಂತ್ ಎಸ್.ಎನ್. ಪ್ರಾ.ಆ.ಕೇಂದ್ರ, ಅಮ್ಮತ್ತೂರು, ಕುಣಿಗಲ್ ತಾ: ತುಮಕೂರು ಜಿಲ್ಲೆ | MS GS | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |

| ಕ್ರ. ಸಂ. | ವೈದ್ಯರ ಹೆಸರು ಮತ್ತು ಕಾರ್ಯನಿರತ ಸ್ಥಳ | ವಿಷಯ | ಆಯ್ಕೆ ಮಾಡಿಕೊಂಡ ವೈದ್ಯಕೀಯ ಕಾಲೇಜಿನ ಹೆಸರು |
|---|---|---|---|
| 9 | ಡಾ: ಮಂಜುಳ ಎಸ್.ಸಿ.<br>ಪ್ರಾ.ಆ.ಕೇಂದ್ರ, ಉಲ್ಲಾಳು, ಬೆಂ.ನ. ಜಿಲ್ಲೆ | MD Phrma | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 10 | ಡಾ: ನಟರಾಜ್ ಬಿ.<br>ಪ್ರಾ.ಆ.ಕೇಂದ್ರ, ಸಾಗರಕಟ್ಟೆ, ಮೈಸೂರು ಜಿಲ್ಲೆ | MD RD | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 11 | ಡಾ: ಪೂರ್ಣಿಮ ಸಿ.<br>ಆ.ಕೇಂದ್ರ, ಭುವನೇಶ್ವರಿ ನಗರ, ಬೆಂ.ಮ.ನ.ಪಾ. ಬೆಂಗಳೂರು | MD Com. Med | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 12 | ಡಾ: ಪ್ರತಿಭಾ ಜೆ.<br>ಪ್ರಾಆಕೇಂ. ಹೊಸೂರು , ಮೈಸೂರು ಜಿಲ್ಲೆ | MD Micro | ಬೆಂಗಳೂರು ಮೆಡಿಕಲ್ ಕಾಲೇಜ್, ಬೆಂಗಳೂರು |
| 13 | ಡಾ: ಪ್ರಿಯ ಆರ್.<br>ಪ್ರಾ.ಆ.ಕೇಂದ್ರ, ಕನಕವಾಡಿ, ದೊಡ್ಡಬಳ್ಳಾಪುರ ತಾ: ಬೆಂ. ಗ್ರಾ ಜಿಲ್ಲೆ | DGO | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 14 | ಡಾ: ರಮಣನ್ ವಿ.<br>ಪ್ರಾ.ಆ.ಕೇಂದ್ರ, ಕೊನೇನಹಳ್ಳಿ, ದೊಡ್ಡಬಳ್ಳಾಪುರ ತಾ: ಬೆಂ. ಗ್ರಾ. ಜಿಲ್ಲೆ | MSGS | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 15 | ಡಾ: ಶಂಕರಪ್ಪ ಆರ್.ವಿ.<br>ಶ್ರೀ ನರಸಿಂಹರಾಜ ಜಿಲ್ಲಾ ಆಸ್ಪತ್ರೆ, ಕೋಲಾರ | MD Anae | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 16 | ಡಾ: ಶಿವಣ್ಣಗೌಡ ಎಸ್ ಪಾಟೀಲ್,<br>ಪ್ರಾಆಕೇ. ಅಮ್ಮಣಗಿ, ಹುಕ್ಕೇರಿ ತಾ;; ಚಿಕ್ಕೋಡಿ | MD GM | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 17 | ಡಾ: ಶ್ರೀಧರ್ ಜಿ.<br>ಪ್ರಾಆಕೇಂ. ಕೆ.ಜಿ. ಹಳ್ಳಿ, ಬೆಂ. ನಗರ ಜಿಲ್ಲೆ | DVD | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 18 | ಡಾ: ಶ್ರೀಧರ್ ಬಿ.ಟಿ.<br>ಪ್ರಾ.ಆ.ಕೇಂದ್ರ, ತಳಗವಾದಿ, ಮಳವಳ್ಳಿ ತಾ: ಮಂಡ್ಯ ಜಿಲ್ಲೆ | DOMS | ಬೆಂಗಳೂರು ಮೆಡಿಕಲ್ ಕಾಲೇಜು, ಬೆಂಗಳೂರು |
| 19 | ಡಾ: ಶ್ರೀನಿವಾಸ.ಎನ್.<br>ಸ.ಆ.ಕೇಂದ್ರ, ಜೆ.ಮಲ್ಲಾಪುರ, ರಾಯಚೂರು ಜಿಲ್ಲೆ | DCH | ಬೆಂಗಳೂರು ಮೆಡಿಕಲ್ ಕಾಲೇಜ್, ಬೆಂಗಳೂರು |
| 20 | ಡಾ: ಸುಧಾ ಸಿ.<br>ಪ್ರಾ.ಆ.ಕೇಂದ್ರ, ಸಿಂಗಟಗೆರೆ, ಕಡೂರು ತಾ: ಚಿಕ್ಕಮಗಳೂರು | DLO | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 21 | ಡಾ: ಸುಜಾತ.ಹೆಚ್ಎಸ್.<br>ಸ.ಆ.ಕೇಂದ್ರ, ಪಡುವಲಹಿಪ್ಪೆ, ಹೆಚ್.ಎನ್.ಪುರ ತಾ: ಹಾಸನ ಜಿಲ್ಲೆ | MD Phy | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 22 | ಡಾ: ವೀಣಾ ಪಿ.ಎಸ್.<br>ಪ್ರಾ.ಆ.ಕೇಂದ್ರ, ಅಜಕಾರು, ಕಾರ್ಕಳ ತಾ: ಉಡುಪಿ ಜಿಲ್ಲೆ | DLO | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 23 | ಡಾ: ಸಿ.ಎನ್. ಪ್ರಭಾವತಿ,<br>ಪ್ರಾಆಕೇಂ. ಚಿಕ್ಕಮದುವಾಡಿ, ಕನಕಪುರ ತಾ: ರಾಮನಗರ ಜಿಲ್ಲೆ | DGO | ಡಾ॥ ಬಿ.ಆರ್.ಅಂಬೇಡ್ಕರ್ ಮೆಡಿಕಲ್ ಕಾಲೇಜ್, ಬೆಂಗಳೂರು |

| ಕ್ರ. ಸಂ. | ವೈದ್ಯರ ಹೆಸರು ಮತ್ತು ಕಾರ್ಯನಿರತ ಸ್ಥಳ | ವಿಷಯ | ಆಯ್ಕೆ ಮಾಡಿಕೊಂಡ ವೈದ್ಯಕೀಯ ಕಾಲೇಜಿನ ಹೆಸರು |
|---|---|---|---|
| 24 | ಡಾ: ವೀಣಾ ಹೆಚ್.<br>ಪ್ರಾ.ಆ.ಕೇಂದ್ರ, ಗೂಳೂರು, ತುಮಕೂರು ತಾ: ಜಿಲ್ಲೆ | MD Com. Med | ಬಿ.ಆರ್.ಅಂಬೇಡ್ಕರ್ ಮೆಡಿಕಲ್ ಕಾಲೇಜು, ಬೆಂಗಳೂರು |
| 25 | ಡಾ: ಭಗವಾನ್ ಬಿ.<br>ಸ.ಆ.ಕೇಂದ್ರ, ಕಮಲಾನಗರ, ಔರಾದ್ ಬಿ. ತಾ: ಬೀದರ್ ಜಿಲ್ಲೆ | MSGS | ಫಾದರ್ ಮುಲ್ಲರ್ ಮೆಡಿಕಲ್ ಕಾಲೇಜ್, ಮಂಗಳೂರು |
| 26 | ಡಾ: ಶೋಭಾ ವಿ.<br>ಪ್ರಾ.ಆ.ಕೇಂದ್ರ, ಅಣ್ಣೀಹಳ್ಳಿ, ಕೋಲಾರ ತಾ; | MD Skin & VD | ಫಾದರ್ ಮುಲ್ಲರ್ ಮೆಡಿಕಲ್ ಕಾಲೇಜ್, ಮಂಗಳೂರು |
| 27 | ಡಾ: ಲಲಿತಾ ಎಂ.<br>ಪ್ರಾ.ಆ.ಕೇಂದ್ರ, ಮಲ್ಲನಾಯಕಹಳ್ಳಿ, ಮುಳಬಾಗಿಲು ತಾ: ಕೋಲಾರ ಜಿಲ್ಲೆ | DCH | ಇಂದಿರಾಗಾಂಧಿ ಇನ್ಸ್ಟಿಟ್ಯೂಟ್ ಆಫ್ ಚೈಲ್ಡ್ ಹೆಲ್ತ್, ಬೆಂಗಳೂರು |
| 28 | ಡಾ: ಸುರೇಶ ಟಿ.ಎನ್.<br>ಜಿಲ್ಲಾ ಆಸ್ಪತ್ರೆ, ಮಂಡ್ಯ ಜಿಲ್ಲೆ | MD Pdea | ಇಂದಿರಾಗಾಂಧಿ ಇನ್ಸ್ಟಿಟ್ಯೂಟ್ ಆಫ್ ಚೈಲ್ಡ್ ಹೆಲ್ತ್, ಬೆಂಗಳೂರು |
| 29 | ಡಾ: ಆನಂದಕುಮಾರ್ ಗುರುಪಾದಪ್ಪ,<br>ಸಾ.ಆ. ಆಳಂದ, ಗುಲ್ಬರ್ಗಾ ಜಿಲ್ಲೆ | MD Patho | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |
| 30 | ಡಾ: ಪ್ರವೀಣ ಕುಮಾರ್ ಕೆ.ಎಸ್.<br>ತಾ.ಆ. ರಾಣಿಬನ್ನೂರು, ಹಾವೇರಿ ಜಿಲ್ಲೆ | MS OBG | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |
| 31 | ಡಾ: ಗಿರೀಶ ಬಿ. ಸಂಗಮ,<br>ಪ್ರಾ.ಆ.ಘಟಕ, ಚಿತ್ರರಗಿ, ಹುನಗುಂದ ತಾ: ಬಾಗಲಕೋಟೆ ಜಿಲ್ಲೆ | MD GM | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |
| 32 | ಡಾ: ನಾಗರಾಜು ಎಸ್.<br>ಪ್ರಾ.ಆ.ಕೇಂದ್ರ, ಅರೆಮಲ್ಲಾಪುರ, ರಾಣಿಬೆನ್ನೂರು ತಾ: ಹಾವೇರಿ ಜಿಲ್ಲೆ | DA | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |
| 33 | ಡಾ: ಪ್ರಕಾಶ್ ಸಿ.<br>ಪ್ರಾಆಘ. ವಿದ್ಯಾನಗರ, ಶಿವಮೊಗ್ಗ ಜಿಲ್ಲೆ | D Ortho | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |
| 34 | ಡಾ: ಪ್ರೀತಿ ಜೆ.ಎಂ.<br>ನ.ಆ.ಕೇಂದ್ರ, ಉಜ್ಜಿನಪುರ, ಶಿವಮೊಗ್ಗ | MD Anae | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |
| 35 | ಡಾ: ರಘು ಜೆ.ಎನ್.<br>ಪ್ರಾ.ಆ.ಕೇಂದ್ರ, ಹೂವಿನಹಳ್ಳಿ ಕಾವಲು, ಹಾಸನ ಜಿಲ್ಲೆ | DPM | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |
| 36 | ಡಾ: ಶ್ರೀಕಾಂತ<br>ಪ್ರಾ.ಆ.ಕೇಂದ್ರ, ಬೆಳ್ವೆ, ಕುಂದಾಪುರ ತಾ: ಉಡುಪಿ ಜಿಲ್ಲೆ | DLO | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |
| 37 | ಡಾ: ಸುಬ್ರಾಯ್ ಹೆಚ್.<br>ತಾ.ಆ. ಭಟ್ಕಳ, ಉ.ಕ. ಜಿಲ್ಲೆ | MD Pead. | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |
| 38 | ಡಾ: ವಿಜಯಲಕ್ಷ್ಮಮ್ಮ ವಿ.<br>ಕುಟುಂಬ ಕಲ್ಯಾಣ, ಮಾಗಡಿ ರಸ್ತೆ, ಬೆಂ. | DGO | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |
| 39 | ಡಾ: ಚಿಕ್ಕಬೋರೆಗೌಡ,<br>ಪ್ರಾ.ಆ.ಕೇಂದ್ರ, ನಾರಾಯಣಪುರ, ಪಾಂಡವಪುರ ತಾ: ಮಂಡ್ಯ ಜಿಲ್ಲೆ | MS GS | ಕಿಮ್ಸ್, ಹುಬ್ಬಳ್ಳಿ |

| ಕ್ರ. ಸಂ. | ವೈದ್ಯರ ಹೆಸರು ಮತ್ತು ಕಾರ್ಯನಿರತ ಸ್ಥಳ | ವಿಷಯ | ಆಯ್ಕೆ ಮಾಡಿಕೊಂಡ ವೈದ್ಯಕೀಯ ಕಾಲೇಜಿನ ಹೆಸರು |
|---|---|---|---|
| 40 | ಡಾ: ಹರೀಶ್ ಬಿ.ಹೆಚ್. ಪ್ರಾ.ಆ.ಕೇಂದ್ರ, ತೇರದಕುಪ್ಪ, ತುಮಕೂರು ಜಿಲ್ಲೆ | MS Opthal | ಕಿಮ್ಸ್, ಹುಬ್ಬಳ್ಳಿ |
| 41 | ಡಾ: ಹೇಮಂತ ನಂದಕುಮಾರ ಭಟ್, ಪ್ರಾ.ಆ.ಘಟಕ, ಚವತ್ತಿ, ಯಲ್ಲಾಪುರ, ಉ.ಕ. ಜಿಲ್ಲೆ | DA | ಕಿಮ್ಸ್, ಹುಬ್ಬಳ್ಳಿ |
| 42 | ಡಾ: ಜಯಲಕ್ಷ್ಮೀ ಬಿ.ಎನ್. ಪ್ರಾ.ಆ.ಕೇಂದ್ರ, ಕಳಸಾಪುರ, ಚಿಕ್ಕಮಗಳೂರು ಜಿಲ್ಲೆ | DGO | ಕಿಮ್ಸ್, ಹುಬ್ಬಳ್ಳಿ |
| 43 | ಡಾ: ಮಹೇಶ್, ಪ್ರಾ.ಆ.ಕೇಂದ್ರ, ಉದ್ಬೂರು, ಮೈಸೂರು ತಾ: ಜಿಲ್ಲೆ | MS GS | ಕಿಮ್ಸ್, ಹುಬ್ಬಳ್ಳಿ |
| 44 | ಡಾ: ಮಂಜುನಾಥ ಎಸ್.ಇ. ಪ್ರಾ.ಆ.ಕೇಂದ್ರ, ಮೇಗರವಳ್ಳಿ, ಶಿವಮೊಗ್ಗ ಜಿಲ್ಲೆ | D Ortho | ಕಿಮ್ಸ್, ಹುಬ್ಬಳ್ಳಿ |
| 45 | ಡಾ: ನಾರಾಯಣಸ್ವಾಮಿ ಆರ್.ಆರ್. ಪ್ರಾ.ಆ.ಕೇಂದ್ರ, ಕೋಡ್ಲಾಪುರ, ಮಧುಗಿರಿ ತಾ: ತುಮಕೂರು ಜಿಲ್ಲೆ | MS GS | ಕಿಮ್ಸ್, ಹುಬ್ಬಳ್ಳಿ |
| 46 | ಡಾ: ಪ್ರಗತಿ ಜೆ. ಭೋರಗಾಂವ್, ಪ್ರಾ.ಆ.ಕೇಂದ್ರ, ನಂದಗಡ, ಖಾನಾಪುರ ತಾ: ಬೆಳಗಾಂ ಜಿಲ್ಲೆ | DOMS | ಕಿಮ್ಸ್, ಹುಬ್ಬಳ್ಳಿ |
| 47 | ಡಾ: ವಿಜಯಕುಮಾರ್ ರಾವ್ ಎಸ್.ಆರ್.ಡಿ. ಪ್ರಾ.ಆ.ಕೇಂದ್ರ, ಜೆ.ಜಿ.ಹಳ್ಳಿ, ಚಿತ್ರದುರ್ಗ ಜಿಲ್ಲೆ | DVD | ಕಿಮ್ಸ್, ಹುಬ್ಬಳ್ಳಿ |
| 48 | ಡಾ: ಶಾಂತಗೌಡ ಪಿ.ಕೆ. ವೈದ್ಯಾಧಿಕಾರಿ, ಪ್ರಾಆಕೇ. ಲಿಂಗನೂರು, ಬಾಗಲಕೋಟೆ ಜಿಲ್ಲೆ | D Ortho | ಕಿಮ್ಸ್, ಹುಬ್ಬಳ್ಳಿ |
| 49 | ಡಾ: ಶರಣಬಸವ, ಪ್ರಾ.ಆ.ಕೇಂದ್ರ, ಮುಸಲಾಪುರ, ಕುಷ್ಟಗಿ ತಾ: ಕೊಪ್ಪಳ ಜಿಲ್ಲೆ | MD GM | ಕಿಮ್ಸ್, ಹುಬ್ಬಳ್ಳಿ |
| 50 | ಡಾ: ಶ್ಯಾಮಲಾ ಶೆಟ್ಟರ್, ಸ.ಆ.ಕೇಂದ್ರ, ಕುಂದಗೋಳ, ಧಾರವಾಡ | MD Micro | ಕಿಮ್ಸ್, ಹುಬ್ಬಳ್ಳಿ |
| 51 | ಡಾ: ವಿಜಯಶಂಕರ್, ಪ್ರಾ.ಆ.ಕೇಂದ್ರ, ಬಲಟಗಿ, ಮಾನ್ವಿ ತಾ: ರಾಯಚೂರು ಜಿಲ್ಲೆ | DA | ಕಿಮ್ಸ್, ಹುಬ್ಬಳ್ಳಿ |
| 52 | ಡಾ: ಅರುಣ್‌ಕುಮಾರ್ ಡಿ.ಪಿ. ಪ್ರಾ.ಆ.ಕೇಂದ್ರ, ಕೇರಳಾಪುರ, ಅರಕಲಗೂಡು ತಾ: ಹಾಸನ ಜಿಲ್ಲೆ | MD Com. Med | ಕೆಂಪೆಗೌಡ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸ್, ಬೆಂಗಳೂರು |
| 53 | ಡಾ: ಅಸ್ಗರ್ ಬೇಗ್ ಸಿ.ಐ. ಪ್ರಾ.ಆ.ಕೇಂದ್ರ, ನಾಗವಲ್ಲಿ, ತುಮಕೂರು ಜಿಲ್ಲೆ | MS Opthal | ಕೆಂಪೆಗೌಡ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸ್, ಬೆಂಗಳೂರು |

| ಕ್ರ. ಸಂ. | ವೈದ್ಯರ ಹೆಸರು ಮತ್ತು ಕಾರ್ಯನಿರತ ಸ್ಥಳ | ವಿಷಯ | ಆಯ್ಕೆ ಮಾಡಿಕೊಂಡ ವೈದ್ಯಕೀಯ ಕಾಲೇಜಿನ ಹೆಸರು |
|---|---|---|---|
| 54 | ಡಾ: ರೇಣುಕಾದೇವಿ ಟಿ.ಎಸ್. ಪ್ರಾ.ಆ.ಕೇಂದ್ರ, ಕಲ್ಕುಣಿ, ಮಳವಳ್ಳಿ ತಾ: ಮಂಡ್ಯ ಜಿಲ್ಲೆ | DGO | ಕೆಂಪೆಗೌಡ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸ್, ಬೆಂಗಳೂರು |
| 55 | ಡಾ: ಸುರೇಂದ್ರ ಕೆ.ಎಸ್. ಪ್ರಾ.ಆ.ಕೇಂದ್ರ, ಸಾತನೂರು, ಮಂಡ್ಯ ತಾ; ಜಿಲ್ಲೆ | MD Anae | ಕೆಂಪೆಗೌಡ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸ್, ಬೆಂಗಳೂರು |
| 56 | ಡಾ: ವೀಣಾ ಎಸ್. ರಾಥೋಡ್ ಜಯನಗರ, ನಗರ ಕುಟುಂಬ ಆರೋಗ್ಯ ಕೇಂದ್ರ, ಬೆಂಗಳೂರು ಮಹಾನಗರ ಪಾಲಿಕೆ | MD Bio Chem | ಕೆಂಪೆಗೌಡ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸ್, ಬೆಂಗಳೂರು |
| 57 | ಡಾ: ರಘುನಂದನ ಕೆ.ಆರ್. ಸಾ.ಆ. ಮಾಗಡಿ, ರಾಮನಗರ ಜಿಲ್ಲೆ | MD RT | ಕಿದ್ವಾಯಿ ಮೆಮೋರಿಯಲ್ ಇನ್ಸ್ಟಿಟ್ಯೂಟ್ ಆಫ್ ಆಂಕಾಲಜಿ, ಬೆಂಗಳೂರು |
| 58 | ಡಾ: ದಬಾಡಿ ಬಿ.ಬಿ. ಪ್ರಾ.ಆ.ಕೇಂದ್ರ, ಹಿರೇಬಾಗೇವಾಡಿ, ಬೆಳಗಾವಿ | MD Com. Med | ಕೆ.ವಿ.ಜಿ.ಮೆಡಿಕಲ್ ಕಾಲೇಜ್, ಸೂಳ್ಯ |
| 59 | ಡಾ: ಜ್ಞಾನಮೂರ್ತಿ ಹೆಚ್.ಪಿ. ಪ್ರಾ.ಆ.ಕೇಂದ್ರ, ಕೊಡಗನೂರು, ದಾವಣಗೆರೆ ತಾ: ಜಿಲ್ಲೆ | MS Opthal | ಕೆ.ವಿ.ಜಿ.ಮೆಡಿಕಲ್ ಕಾಲೇಜ್, ಸೂಳ್ಯ |
| 60 | ಡಾ: ವಿಜಯಲಕ್ಷ್ಮೀ ಬಿ.ಎನ್. ಪ್ರಾ.ಆ.ಕೇಂದ್ರ, ಬೋಳನಹಳ್ಳಿ, ಹುಣಸೂರು ತಾ: ಮೈಸೂರು ಜಿಲ್ಲೆ | MD Anotomy | ಕೆ.ವಿ.ಜಿ.ಮೆಡಿಕಲ್ ಕಾಲೇಜ್, ಸೂಳ್ಯ |
| 61 | ಡಾ: ವಿವೇಕ್ ಎಸ್. ಹೊನ್ನಳ್ಳಿ, ಸ.ಆ.ಕೇಂದ್ರ, ಕುಡಚಿ, ರಾಯಭಾಗ ತಾ: | MD GM | ಎಂ.ಆರ್.ಮೆಡಿಕಲ್ ಕಾಲೇಜ, ಗುಲ್ಬರ್ಗ |
| 62 | ಡಾ: ಆರ್.ಆರ್. ಹಳ್ಳಿಕೇರಿ, ಪ್ರಾ.ಆಕೇಂ. ಹಳ್ಳವರಾ ಧಾರವಾಡ ಜಿಲ್ಲೆ | MS GS | ಎಂ.ಆರ್.ಮೆಡಿಕಲ್ ಕಾಲೇಜ, ಗುಲ್ಬರ್ಗ |
| 63 | ಡಾ: ಸತೀಶ್‌ಕುಮಾರ್ ಎ. ಸಾ.ಆ. ಸಂಡೂರು, ಬಳ್ಳಾರಿ ಜಿಲ್ಲೆ | DA | ಎಂ.ಆರ್.ಮೆಡಿಕಲ್ ಕಾಲೇಜ, ಗುಲ್ಬರ್ಗ |
| 64 | ಡಾ: ಚೌಡಪ್ಪ ಆರ್. ಜಿಲ್ಲಾ ಕು.ರೋ.ನಿ.ಅ. ಚಿಕ್ಕಬಳ್ಳಾಪುರ | DA | ಎಂ.ಎಸ್.ರಾಮಯ್ಯ ಮೆಡಿಕಲ್ ಕಾಲೇಜು, ಬೆಂಗಳೂರು |
| 65 | ಡಾ: ಹಾವಿನಾಳ ಎಸ್.ವಿ. ಪ್ರಾ.ಆ.ಕೇಂದ್ರ, ಉಗಾರ, ಅಥಣಿ ತಾ: ಬೆಳಗಾಂ ಜಿಲ್ಲೆ | D Ortho | ಎಂ.ಎಸ್.ರಾಮಯ್ಯ ಮೆಡಿಕಲ್ ಕಾಲೇಜು, ಬೆಂಗಳೂರು |
| 66 | ಡಾ: ಕಲಾವತಿ ಪಿ. ಪ್ರಾ.ಆ.ಕೇಂದ್ರ, ಕೇರಳಾಪುರ, ಅರಕಲಗೂಡು ತಾ: ಹಾಸನ ಜಿಲ್ಲೆ | MS GS | ಎಂ.ಎಸ್.ರಾಮಯ್ಯ ಮೆಡಿಕಲ್ ಕಾಲೇಜು, ಬೆಂಗಳೂರು |
| 67 | ಡಾ: ರಾಚಪ್ಪ ಬಿ. ಪ್ರಾ.ಆ.ಕೇಂದ್ರ, ಮಸ್ಕಿ, ಲಿಂಗಸಗೂರು ತಾ: ರಾಯಚೂರು ಜಿಲ್ಲೆ | MD GM | ಎಂ.ಎಸ್.ರಾಮಯ್ಯ ಮೆಡಿಕಲ್ ಕಾಲೇಜು, ಬೆಂಗಳೂರು |
| 68 | ಡಾ: ಸಭೀರ ದಸ್ತಗಿರಾ ಪಟೇಲ್, ಪ್ರಾ.ಆ.ಕೇಂದ್ರ. ತೇರದಾಳ, ಜಮಖಂಡಿ ತಾ: ಬಾಗಲಕೋಟೆ ಜಿಲ್ಲೆ | MS Ortho | ಎಂ.ಎಸ್.ರಾಮಯ್ಯ ಮೆಡಿಕಲ್ ಕಾಲೇಜು, ಬೆಂಗಳೂರು |

| ಕ್ರ. ಸಂ. | ವೈದ್ಯರ ಹೆಸರು ಮತ್ತು ಕಾರ್ಯನಿರತ ಸ್ಥಳ | ವಿಷಯ | ಆಯ್ಕೆ ಮಾಡಿಕೊಂಡ ವೈದ್ಯಕೀಯ ಕಾಲೇಜಿನ ಹೆಸರು |
|---|---|---|---|
| 69 | ಡಾ: ರಾಜಪ್ಪ ಬಿ. ಪ್ರಾ.ಆ.ಕೇಂದ್ರ, ಬಸವಪಟ್ಟಣ, ಚನ್ನಗಿರಿ ತಾ: ದಾವಣಗೆರೆ ಜಿಲ್ಲೆ | MD Anae | ಎಂ.ವಿ.ಜೆ.ಮೆಡಿಕಲ್ ಕಾಲೇಜ್, ಬೆಂಗಳೂರು |
| 70 | ಡಾ: ಶಿವಪ್ರಸಾದ್ ಎಂ.ಜಿ. ಪ್ರಾ.ಆ.ಕೇಂದ್ರ, ಚಿಕ್ಕನಂದಿ, ಹೆಚ್.ಡಿ.ಕೋಟೆ ತಾ: ಮೈಸೂರು ಜಿಲ್ಲೆ | DA | ಎಂ.ವಿ.ಜೆ.ಮೆಡಿಕಲ್ ಕಾಲೇಜ್, ಬೆಂಗಳೂರು |
| 71 | ಡಾ: ವೆಂಕಟೇಶ್ ಡಿ.ಎಸ್. ಸಾ.ಆ. ನಾಗಮಂಗಲ, ಮಂಡ್ಯ ಜಿಲ್ಲೆ | D Ortho | ಎಂ.ವಿ.ಜೆ.ಮೆಡಿಕಲ್ ಕಾಲೇಜ್, ಬೆಂಗಳೂರು |
| 72 | ಡಾ: ಅನಿತಾ ಎಂ.ಎಸ್. ಪ್ರಾ.ಆ.ಕೇಂದ್ರ, ಹಳೇ ಅಗ್ರಹಾರ, ಮೈಸೂರು | MD GM | ಮೈಸೂರು ಮೆಡಿಕಲ್ ಕಾಲೇಜು, ಮೈಸೂರು |
| 73 | ಡಾ: ಭಾಗೀರಥಿ ಎಲ್. ಪ್ರಾ.ಆ.ಕೇಂದ್ರ, ಇಟ್ಟಿಗಿ, ಹಡಗಲಿ ತಾ: ಬಳ್ಳಾರಿ ಜಿಲ್ಲೆ | MD Micro | ಮೈಸೂರು ಮೆಡಿಕಲ್ ಕಾಲೇಜು, ಮೈಸೂರು |
| 74 | ಡಾ: ಜಯಕುಮಾರಿ ಎಂ. ಪ್ರಾ.ಆ.ಕೇಂದ್ರ, ಕೋಟೇಶ್ವರ, ಕುಂದಾಪುರ ತಾ: ಉಡುಪಿ ಜಿಲ್ಲೆ | DA | ಮೈಸೂರು ಮೆಡಿಕಲ್ ಕಾಲೇಜು, ಮೈಸೂರು |
| 75 | ಡಾ: ಮಾಲಿನಿ ಎಸ್. ಪ್ರಾ.ಆ.ಕೇಂದ್ರ, ಬ್ರಹ್ಮಸಂದ್ರ, ಶಿರಾ, ತುಮಕೂರು ಜಿಲ್ಲೆ | MS OBG | ಮೈಸೂರು ಮೆಡಿಕಲ್ ಕಾಲೇಜು, ಮೈಸೂರು |
| 76 | ಡಾ: ಮಂಜುನಾಥ ಟಿ. ತಾಲ್ಲೂಕು ಆಸ್ಪತ್ರೆ, ಮೊಳಕಾಲ್ಮೂರು, ಚಿತ್ರದುರ್ಗ | DGO | ಮೈಸೂರು ಮೆಡಿಕಲ್ ಕಾಲೇಜು, ಮೈಸೂರು |
| 77 | ಡಾ: ಮಹಮ್ಮದ್ ಅಫ್ರೋಜ್ ಅಹಮದ್, ಪ್ರಾ.ಆ.ಕೇಂದ್ರ, ಕೊಡಗನೂರು, ದಾವಣಗೆರೆ ತಾ: ಜಿಲ್ಲೆ | MD Patho | ಮೈಸೂರು ಮೆಡಿಕಲ್ ಕಾಲೇಜು, ಮೈಸೂರು |
| 78 | ಡಾ: ನಟರಾಜ್.ಡಿ. ಪ್ರಾಆಕೇಂ. ತಿಪೂರು, ಕೆ.ಆರ್.ನಗರ ತಾ: ಮೈಸೂರು | DTCD | ಮೈಸೂರು ಮೆಡಿಕಲ್ ಕಾಲೇಜು, ಮೈಸೂರು |
| 79 | ಡಾ: ನೀಲವೇಣಿ ಬಿ.ಆರ್. ಪ್ರಾ.ಆ.ಕೇಂದ್ರ, ದೊಡ್ಡರಸಿನಕೆರೆ, ಮದ್ದೂರು ತಾ: ಮಂಡ್ಯ ಜಿಲ್ಲೆ | DA | ಮೈಸೂರು ಮೆಡಿಕಲ್ ಕಾಲೇಜು, ಮೈಸೂರು |
| 80 | ಡಾ: ಸಂಗೀತಾ, ಎನ್‌ಪಿಸಿ ಹೆರಿಗೆ ಆಸ್ಪತ್ರೆ, ನಜರಾಬಾದ್, ಮೈಸೂರು | MD Pharma | ಮೈಸೂರು ಮೆಡಿಕಲ್ ಕಾಲೇಜು, ಮೈಸೂರು |
| 81 | ಡಾ: ಸೀತಾರಾಂ ಬಿ.ಎ. ಪ್ರಾ.ಆ.ಕೇಂದ್ರ, ಸಾಣೀಕೆರೆ, ಚಳ್ಳಕೆರೆ ತಾ: ಚಿತ್ರದುರ್ಗ ಜಿಲ್ಲೆ | DOMS | ಮೈಸೂರು ಮೆಡಿಕಲ್ ಕಾಲೇಜು, ಮೈಸೂರು |
| 82 | ಡಾ: ಶಿವಕುಮಾರ್ ಸಿ.ಎನ್. ಪ್ರಾ.ಆ.ಕೇಂದ್ರ, ಮೈಲನಾಯಕನಹೊಸಳ್ಳಿ, ಚನ್ನಪಟ್ಟಣ ತಾ: ರಾಮನಗರ ಜಿಲ್ಲೆ | DA | ಮೈಸೂರು ಮೆಡಿಕಲ್ ಕಾಲೇಜು, ಮೈಸೂರು |

| ಕ್ರ. ಸಂ. | ವೈದ್ಯರ ಹೆಸರು ಮತ್ತು ಕಾರ್ಯನಿರತ ಸ್ಥಳ | ವಿಷಯ | ಆಯ್ಕೆ ಮಾಡಿಕೊಂಡ ವೈದ್ಯಕೀಯ ಕಾಲೇಜಿನ ಹೆಸರು |
|---|---|---|---|
| 83 | ಡಾ: ಶಿವಪ್ಪ ಜಿ.ಸಿ. ಇಡಿ ಆಸ್ಪತ್ರೆ, ಕೆ.ಆರ್.ಎಸ್. ರಸ್ತೆ, ಮೇಟಗಳ್ಳಿ, ಮೈಸೂರು | MD Phy | ಮೈಸೂರು ಮೆಡಿಕಲ್ ಕಾಲೇಜು, ಮೈಸೂರು |
| 84 | ಡಾ: ಶ್ರೀನಿವಾಸ ಜಿ.ಎಸ್. ಜಿ.ಕ್ಷ.ರೋ. ಅಧಿಕಾರಿ, ಜಿಲ್ಲಾ ಆಕುಕ ಕಛೇರಿ, ರಾಮನಗರ ಜಿಲ್ಲೆ | MS Opthal | ಮೈಸೂರು ಮೆಡಿಕಲ್ ಕಾಲೇಜು, ಮೈಸೂರು |
| 85 | ಡಾ: ಶ್ರೀನಿವಾಸನ್ ಕೆ.ಆರ್. ಪ್ರಾ.ಆ.ಕೇಂದ್ರ, ಹಲಗನಹಳ್ಳಿ, ಪಿರಿಯಾಪಟ್ಟಣ ತಾ: ಮೈಸೂರು | MS GS | ಮೈಸೂರು ಮೆಡಿಕಲ್ ಕಾಲೇಜು, ಮೈಸೂರು |
| 86 | ಡಾ: ವೀಣಾ ಎ.ಎಸ್. ಪ್ರಾ.ಆ.ಕೇಂದ್ರ, ಕೊಕ್ಕನೂರು, ಹರಿಹರ ತಾ: ದಾವಣಗೆರೆ ಜಿಲ್ಲೆ | MD Patho | ನವೋದಯ ಮೆಡಿಕಲ್ ಕಾಲೇಜ್, ರಾಯಚೂರು |
| 87 | ಡಾ: ಆಶಾ ಎಸ್. ಜಿಲ್ಲಾ ಆಸ್ಪತ್ರೆ, ಮಡಕೇರಿ | DA | ವಿಮ್ಸ್. ಬಳ್ಳಾರಿ |
| 88 | ಡಾ: ಬಾಲಸುಂದರ್ ಬಿ.ಸಿ. ಪ್ರಾ.ಆ.ಕೇಂದ್ರ, ಕಾರಹಳ್ಳಿ, ದೇವನಹಳ್ಳಿ ತಾ: ಬೆಂಗಳೂರು (ಗ್ರಾ) | MD Pead. | ವಿಮ್ಸ್. ಬಳ್ಳಾರಿ |
| 89 | ಡಾ: ದಯಾನಂದಬಾಬು, ಆ.ಘಟಕ, ಬಸವಾಪಟ್ಟಣ್ಣ, ಹಾಸನ ಜಿಲ್ಲೆ | D Orth | ವಿಮ್ಸ್, ಬಳ್ಳಾರಿ |
| 90 | ಡಾ: ಗೋವಿಂದ ಯು. ಪ್ರಾ.ಆ.ಕೇಂದ್ರ, ಭಾನುವಳ್ಳಿ, ಹರಿಹರ ತಾ: ದಾವಣಗೆರೆ ಜಿಲ್ಲೆ | D Orth | ಬೆಂಗಳೂರು ವೈದ್ಯಕೀಯ ವಿದ್ಯಾಲಯ, ಬೆಂಗಳೂರು |
| 91 | ಡಾ: ಕರ್ನೂಲ ಗಣೇಶ್, ಪ್ರಾ.ಆ.ಕೇಂದ್ರ, ಇಡಪನೂರ್, ರಾಯಚೂರು | DCH | ವಿಜಯನಗರ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಕಾಲೇಜ್, ಬಳ್ಳಾರಿ |
| 92 | ಡಾ: ಪ್ರಶಾಂತಬಾಬು.ಜಿ, ಜಿಲ್ಲಾ ಆರ್.ಸಿ.ಹೆಚ್. ಅಧಿಕಾರಿಗಳು, ಕೊಪ್ಪಳ | MD Phy | ವಿಜಯನಗರ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಕಾಲೇಜ್, ಬಳ್ಳಾರಿ |
| 93 | ಡಾ: ಸುರೇಶ ಕೆ.ಎಸ್. ಪ್ರಾ.ಆ.ಕೇಂದ್ರ, ಹಾಲ್ಕುರಿಕೆ, ತಿಪಟೂರು ತಾ: ತುಮಕೂರು ಜಿಲ್ಲೆ | MD GM | ವಿಮ್ಸ್. ಬಳ್ಳಾರಿ |
| 94 | ಡಾ: ಚಂದ್ರಶೇಖರ್ ಎಂ. ಪ್ರಾ.ಆ.ಕೇಂದ್ರ, ಕೆರಗೋಡು, ಮಂಡ್ಯ ಜಿಲ್ಲೆ | MD Psy | ವೈದೇಹಿ ವೈದ್ಯಕೀಯ ಸಂಸ್ಥೆ, ಬೆಂಗಳೂರು |
| 95 | ಡಾ: ರಮೇಶ್ ಡಿ.ಹೆಚ್. ಪ್ರಾ.ಆ.ಕೇಂದ್ರ, ಮರೂರು, ರಾಮನಗರ ಜಿಲ್ಲೆ | MD Micro | ಜೆ.ಜೆ.ಎಂ.ಮೆಡಿಕಲ್ ಕಾಲೇಜ್, ದಾವಣಗೆರೆ |
| 96 | ಡಾ: ವಿಜಯ ಎಂ.ಸಿ. ಪ್ರಾ.ಆ.ಕೇಂದ್ರ, ರೋಣೂರು, ಕೋಲಾರ –563135 | DGO | ವೈದೇಹಿ ವೈದ್ಯಕೀಯ ಸಂಸ್ಥೆ, ಬೆಂಗಳೂರು |

**4 Years and Above**

| | | | |
|---|---|---|---|
| 1 | ಡಾ: ಮೀನಾಕ್ಷಿ ಕೆ.ಎಸ್.<br>ಪ್ರಾ.ಆ.ಕೇಂದ್ರ, ಲಕ್ಕುಂಡಿ, ಗದಗ ತಾ: ಜಿಲ್ಲೆ | MD Patho | ಎಸ್.ನಿಜಲಿಂಗಪ್ಪ ಮೆಡಿಕಲ್ ಕಾಲೇಜ್, ಬಾಗಲಕೋಟ್ |
| 2 | ಡಾ: ಲಕ್ಷ್ಮೀದೇವಿ ಎಂ.<br>ಐಪಿಪಿ ಹೆರಿಗೆ ಕೇಂದ್ರ, ಅರಕೆರೆ,<br>ಬೆಂ.ದ.ತಾ. ನಗರ ಜಿಲ್ಲೆ | MD Anatomy | ವಿಮ್ಸ್. ಬಳ್ಳಾರಿ |
| 3 | ಡಾ: ಗಿರೀಶ್ ಡಿ.ಸಿ.<br>ಪ್ರಾ.ಆ.ಕೇಂದ್ರ, ವಿಜಿಪುರ, ಚಿತ್ರದುರ್ಗ ತಾ: | D Ortho | ಬೆಂಗಳೂರು ಮೆಡಿಕಲ್ ಕಾಲೇಜ್, ಬೆಂಗಳೂರು |

**3rd year and Above**

| | | | |
|---|---|---|---|
| 1 | ಡಾ: ರೇಣುಕಾ,<br>ಪ್ರಾಆಘಟಕ. ಕುಪ್ಪೂರು,<br>ಚಿಕ್ಕನಾಯಕನಹಳ್ಳಿ ತಾ: ತುಮಕೂರು | DMRD | ಜೆ.ಜೆ.ಎಂ. ಮೆಡಿಕಲ್ ಕಾಲೇಜ್, ದಾವಣಗೆರೆ |
| 2 | ಡಾ: ರವೀಂದ್ರನಾಥ ಎಸ್.<br>ಪ್ರಾ.ಆ.ಕೇಂದ್ರ್ರ, ಅಲೀಪುರ,<br>ಗೌರಿಬಿದನೂರು ತಾ: ಚಿಕ್ಕಬಳ್ಳಾಪುರ ಜಿಲ್ಲೆ | DVD | ಫಾದರ್‌ಮುಲ್ಲರ್ ವೈದ್ಯಕೀಯ ವಿದ್ಯಾ ಸಂಸ್ಥೆ, ಮಂಗಳೂರು |
| 3 | ಡಾ: ಮಂಜುನಾಥ ಡಿ.ಎನ್.<br>ಸಾ.ಆ. ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ | MS ENT | ವೈದೇಹಿ ವೈದ್ಯಕೀಯ ಸಂಸ್ಥೆ, ಬೆಂಗಳೂರು |

**ಐ. ಹೇಮನಾಥ್**

ಪಿ.ಆರ್.584 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು-1).

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿ (ನಿಯಮ 441) ವೈಶ್ಯ ಕೋ-ಆಪರೇಟಿವ್ ಬ್ಯಾಂಕ್ ಲಿ., ಬಿ.ಹೆಚ್. ರಸ್ತೆ, ತುಮಕೂರು, ಇವರ ನಡವಳಿಕೆಗಳು**

**ಅಮಲ್ಜಾರಿ ಸಂಖ್ಯೆ: 08/2002-03, ಎಆರ್‌ಇ/ಯುಬಿಎಫ್/1096/2007-08(ವ) ಮತ್ತು 06/2008-09(ವ)**

**ಅಂತಿಮ ಬಿಡ್‌ದಾರರು:** ಶ್ರೀ ಮೊಹಮದ್ ಜಾವಿದ್ ಬಿನ್ ಹಾಜಿ ಮೊಹಮದ್ ಘಜಲುಲ್ಲಾ, ಮೆ: ಎಂ.ಎ.ಜಿ. ಸಾ ಮಿಲ್, ತುಮಕೂರು ರಸ್ತೆ, ಪಾವಗಡ.

| **ಡಿಕ್ರಿ ಹೋಲ್ಡರ್** | | **ತೀರ್ಪು ಋಣಿ** |
|---|---|---|
| ಮುಖ್ಯ ಕಾರ್ಯನಿರ್ವಹಣಾಧಿಕಾರಿ, ವೈಶ್ಯ ಕೋ-ಆಪರೇಟಿವ್ ಬ್ಯಾಂಕ್ ಲಿ., ತುಮಕೂರು. | **ವಿರುದ್ಧ** | 1) ಶ್ರೀ ಸಿ.ಎಸ್. ಚಕ್ರವರ್ತಿ ಬಿನ್ ಎಂ.ಚಂದ್ರಶೇಖರಯ್ಯ, ಹೊಸಹಳ್ಳಿ, ಜಂಗಮನಹಳ್ಳಿ ಅಂಚೆ, ವಯಾ ಮಂಗಳವಾಡ, ಪಾವಗಡ ತಾಲ್ಲೂಕು.<br>2) ಶ್ರೀ ಎಂ.ಚಂದ್ರಶೇಖರಯ್ಯ ಬಿನ್ ಲೇಟ್ ಮಲ್ಲಪ್ಪ, ಹಳೇ ಎಸ್.ಎಸ್. ಕಲ್ಯಾಣ ಮಂಟಪ ರಸ್ತೆ, ಪಾವಗಡ. ವಾಸ: ಹೊಸಹಳ್ಳಿ, ಜಂಗಮನಹಳ್ಳಿ ಅಂಚೆ, ವಯಾ ಮಂಗಳವಾಡ, ಪಾವಗಡ ತಾಲ್ಲೂಕು. |

**ಪ್ರಸ್ತಾವನೆ:**

ಶ್ರೀ ಸಿ.ಎಸ್. ಚಕ್ರವರ್ತಿ ಬಿನ್ ಎಂ.ಚಂದ್ರಶೇಖರಯ್ಯ, ಹೊಸಹಳ್ಳಿ, ಜಂಗಮನಹಳ್ಳಿ ಅಂಚೆ, ವಯಾ ಮಂಗಳವಾಡ, ಪಾವಗಡ, ಇವರು ವೈಶ್ಯ ಕೋ-ಆಪರೇಟಿವ್ ಬ್ಯಾಂಕ್ ಲಿ., ಪಾವಗಡ ಶಾಖೆಯಲ್ಲಿ ರು.2.50 ಲಕ್ಷ ಸಾಲ ಪಡೆದಿದ್ದು, ಸದರಿ ಶ್ರೀ ಸಿ.ಎಸ್. ಚಕ್ರವರ್ತಿ ಇವರು ಅವರ ತಂದೆಯವರಾದ ಶ್ರೀ ಎಂ. ಚಂದ್ರಶೇಖರಯ್ಯ ಬಿನ್ ಮಲ್ಲಪ್ಪ ಇವರ ಹೆಸರಿನಲ್ಲಿದ್ದ ಸ್ಥಿರಾಸ್ತಿಯನ್ನು ಕಾನೂನು ರೀತ್ಯಾ ಈ ಬ್ಯಾಂಕಿಗೆ ಡಿಪಾಸಿಟ್ ಆಫ್ ಟೈಟಲ್ ಡೀಡ್ಸ್, ಮಾಡಿಕೊಟ್ಟಿರುತ್ತಾರೆ. ಸದರಿ ಶ್ರೀ ಸಿ.ಎಸ್. ಚಕ್ರವರ್ತಿರವರು ಸಾಲ ಮರುಪಾವತಿಸುವಲ್ಲಿ ವಿಫಲರಾದ ಪ್ರಯುಕ್ತ ಸಹಕಾರ ಕಾಯಿದೆ ಕಲಂ 70 ರಡಿಯಲ್ಲಿ ದಾವೆ ಹೂಡಿ ದಿನಾಂಕ:27.05.2002 ರಂದು ರೂ.2,51,016/- ಮತ್ತು ಶೇ.15.5+ ಶೇ.2ರ ಸುಸ್ತಿ ಬಡ್ಡಿ ಸಮೇತ ಸಾಲ ವಸೂಲಿ ಮಾಡಿಕೊಳ್ಳಲು ಡಿಕ್ರಿ ಆದೇಶ ಪಡೆಯಲಾಗಿದೆ. ಡಿಕ್ರಿದಾರ ಬ್ಯಾಂಕಿನ ಮಾರಾಟಾಧಿಕಾರಿಗಳು ಸಾಲಗಾರರು ಆಧಾರ ಮಾಡಿರುವ ಷೆಡ್ಯೂಲ್ ಸ್ಥಿರಾಸ್ತಿಯನ್ನು ದಿನಾಂಕ:25.03.2009ರಲ್ಲಿ ಬಹಿರಂಗ ಹರಾಜು ನಡೆಸಿರುತ್ತಾರೆ. ಸದರಿ ಹರಾಜಿನಲ್ಲಿ ಶ್ರೀ

ಮೊಹಮದ್ ಜಾವಿದ್ ಬಿನ್ ಹಾಜಿ ಮೊಹಮದ್ ಫಜಲುಲ್ಲಾ, ಮೆ: ಎಂ.ಎ.ಜಿ. ಸಾ ಮಿಲ್, ತುಮಕೂರು ರಸ್ತೆ, ಪಾವಗಡ, ಇವರು ಷೆಡ್ಯೂಲ್ ಸ್ಥಿರಾಸ್ತಿಯನ್ನು ರೂ.5,00,000/–ಗಳಿಗೆ ಖರೀದಿಸಿರುತ್ತಾರೆ. ಬಿಡ್‌ದಾರರು ಬಿಡ್ ಮೊತ್ತವನ್ನು ಡಿಕ್ರಿದಾರ ಬ್ಯಾಂಕಿಗೆ ಪೂರ್ಣವಾಗಿ ಪಾವತಿ ಮಾಡಿರುತ್ತಾರೆ. ಬ್ಯಾಂಕಿನ ಮಾರಾಟಾಧಿಕಾರಿಗಳು/ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು ಉಲ್ಲೇಖಿತ ಪತ್ರದಲ್ಲಿ ಸದರಿ ಮಾರಾಟವನ್ನು ಸ್ಥಿರೀಕರಣಗೊಳಿಸಿ ದೃಢೀಕರಣ ನೀಡಲು ಪ್ರಸ್ತಾವೆ ಸಲ್ಲಿಸಿರುತ್ತಾರೆ.

ಪ್ರಸ್ತಾವೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಸಾಲಗಾರರಿಗೆ ಅಂತಿಮವಾಗಿ ಹೇಳಿಕೆ ನೀಡಲು 30 ದಿನಗಳ ಕಾಲಾವಕಾಶ ನೀಡಿ ದಿನಾಂಕ:28.03.2009ರಂದು ನೋಟೀಸ್ ನೀಡಲಾಗಿರುತ್ತದೆ. ಈ ಬಗ್ಗೆ ತೀರ್ಪುಋಣಿದಾರರಿಂದ/ ಸಾಲಗಾರರಿಂದ ಯಾವುದೇ ಹೇಳಿಕೆ, ವಿವರಣೆ ಬಾರದೇ ಇದ್ದುದರಿಂದ ಹಾಗೂ ಸಾಲ ತೀರುವಳಿ ಮಾಡಲು ವಿಫಲರಾಗಿರುವುದನ್ನು ಪರಿಗಣಿಸಿದ್ದು, ಷೆಡ್ಯೂಲ್ ಸ್ಥಿರಾಸ್ತಿಯನ್ನು ದಿನಾಂಕ:25.03.2009ರಂದು ಬಹಿರಂಗ ಹರಾಜು ನಡೆಸಿರುವುದನ್ನು ಮಾರಾಟ ಸ್ಥಿರೀಕರಣಗೊಳಿಸುವುದರ ವಿನಹ ಬೇರೆ ಮಾರ್ಗ ಇರುವುದಿಲ್ಲ ಎಂಬ ತೀರ್ಮಾನಕ್ಕೆ ಬಂದಿದ್ದು, ಶ್ರೀ ಮೊಹಮದ್ ಜಾವಿದ್ ಬಿನ್ ಹಾಜಿ ಮೊಹಮದ್ ಫಜಲುಲ್ಲಾ, ಮೆ: ಎಂಎಜಿ ಸಾ ಮಿಲ್, ತುಮಕೂರು ರಸ್ತೆ, ಪಾವಗಡ, ಇವರಿಗೆ ಷೆಡ್ಯೂಲ್ ಸ್ಥಿರಾಸ್ತಿಯನ್ನು ರೂ.5,00,000/–ಗಳಿಗೆ ಮಾರಾಟವಾಗಿರುವುದನ್ನು ಸ್ಥಿರೀಕರಣಗೊಳಿಸಿ ಈ ಕೆಳಕಂಡಂತೆ ಆದೇಶ ನೀಡಿರುತ್ತೇನೆ.

**ಆದೇಶ**

**ಸಂಖ್ಯೆ: ವಸೂಲಾಧಿಕಾರಿ/ ವೈ.ಕೋ.ಬ್ಯಾಂಕ್/10/2009–10, ದಿನಾಂಕ:21ನೇ ಮೇ, 2009**

ಹೆಚ್.ಆರ್. ಮಲ್ಲಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು (ನಿಯಮ 441) ವೈಶ್ಯ ಕೋ–ಆಪರೇಟಿವ್ ಬ್ಯಾಂಕ್ ಲಿ., ತುಮಕೂರು, ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ 38(6)ರನ್ವಯ ದತ್ತವಾದ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2000, ದಿನಾಂಕ:21.11.2001ರ ಅನ್ವಯ ಪ್ರತ್ಯಾಯೋಜಿಸಲ್ಪಟ್ಟ ಅಧಿಕಾರವನ್ನು ಚಲಾಯಿಸಿ ಈ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಸಿ.ಎಸ್. ಚಕ್ರವರ್ತಿ ಬಿನ್. ಎಂ. ಚಂದ್ರಶೇಖರಯ್ಯ ಬಿನ್ ಲೇಟ್ ಮಲ್ಲಪ್ಪ, ಹೊಸಹಳ್ಳಿ ಜಂಗಮನಹಳ್ಳಿ ಅಂಚೆ, ವಯಾ ಮಂಗಳವಾಡ, ಪಾವಗಡ, ಇವರ ಈ ಕೆಳಕಂಡ ಸ್ಥಿರಾಸ್ತಿಯನ್ನು ದಿನಾಂಕ:25.03.2009ರಂದು ನಡೆದ ಬಹಿರಂಗ ಹರಾಜಿನಲ್ಲಿ ಶ್ರೀ ಮೊಹಮದ್ ಜಾವಿದ್ ಬಿನ್ ಹಾಜಿ ಮೊಹಮದ್ ಫಜಲುಲ್ಲಾ, ಮೆ: ಎಂ.ಎ.ಜಿ. ಸಾ ಮಿಲ್, ತುಮಕೂರು ರಸ್ತೆ, ಪಾವಗಡ., ಇವರು ರೂ.5,00,000/– (ಐದು ಲಕ್ಷ ರೂಪಾಯಿ)ಗಳಿಗೆ ಖರೀದಿಸಿರುವುದನ್ನು ಒಪ್ಪಿ ಈ ಮೂಲಕ ಸದರಿಯವರಿಗೆ ಮಾರಾಟ ಸ್ಥಿರೀಕರಣ ಆದೇಶ ನೀಡಿರುತ್ತೇನೆ. ಮಾರಾಟದ ಮೊತ್ತವನ್ನು ಸಾಲಗಾರರ ಸಾಲದ ಖಾತೆಗೆ ಜಮಾ–ಖರ್ಚು ಮಾಡಿಕೊಳ್ಳಲು ಆದೇಶಿಸಿದೆ.

**ಷೆಡ್ಯೂಲ್ ಸ್ವತ್ತಿನ ವಿವರ**

ಪಾವಗಡ ಪಟ್ಟಣದ ಹಳೇ ಶನಿಮಹಾತ್ಮ ಕಲ್ಯಾಣ ಮಂಟಪದ ರಸ್ತೆಯಲ್ಲಿರುವ ಮುನಿಸಪಲ್ ಖಾತಾ ಸಂಖ್ಯೆ: 3559ಎ/2411ರ ಅಳತೆ 52.6 x 66 ಅಡಿಗಳ ಸ್ವತ್ತಿಗೆ ಚಕ್ಕುಬಂದಿ:

ಪೂರ್ವಕ್ಕೆ: ಫಕ್ರುದ್ದೀನ್ ಸಾಬ್‌ರವರ ಸ್ವತ್ತು;
ಪಶ್ಚಿಮಕ್ಕೆ: ಸರಸ್ವತಮ್ಮನವರ ಸ್ವತ್ತು;
ಉತ್ತರಕ್ಕೆ: ಕೋಟೆ ಗೋಡೆ;
ದಕ್ಷಿಣಕ್ಕೆ: ರಸ್ತೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:21.05.2009ರಂದು ನನ್ನ ಹಸ್ತಾಕ್ಷರಗಳಲ್ಲಿ ಕಛೇರಿ ಮುದ್ರೆಯೊಂದಿಗೆ ನೀಡಿರುತ್ತೇನೆ.

**ಹೆಚ್.ಆರ್. ಮಲ್ಲಪ್ಪ**
ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ
ವಸೂಲಾತಿ ಅಧಿಕಾರಿ (ನಿಯಮ 441) ವೈಶ್ಯ
ಕೋ–ಆಪರೇಟಿವ್ ಬ್ಯಾಂಕ್ ಲಿ., ತುಮಕೂರು.

ಪಿ.ಡಿ.39

**INDIAN RAILWAYS**

**"PUBLIC NOTIFICATION"** **Proforma 10-01**

Notice is hereby given to all users of Railway lines and premises situated on the completed section of the under noted sections of South Western Railway that the 25000 Volt, 50Hz., AC overhead traction wires will be energized on or after the date specified against the Section. On and from the same date the overhead traction line shall be treated as live at all times and no unauthorized person shall approach or work in the proximity of the said overhead line.

| Section | Date |
| --- | --- |
| New BG Upline from Kengeri location No.12/37 (Ch.km 12/790-30 to Bangalore City. Location No.356/14 (ch.km.356/420.50) | 19.07.2009 |

No:E/CN/SBC-KGI/OHE/CRS

Date:15.06.2009

Place: Bangalore Cantonment

Chief Engineer/Head Quarter/Construction,
South Western Railways,Bangalore-560 046.

**INDIAN RAILWAYS**

**INTRODUCTION OF AC 25 KV TRACTION** **Proforma 10-02**

**"WARNING TO ROAD USERS"**

It is notified for information of the public that in connection with introduction of 25 KV AC electric traction over the section of new BG Up line from Kengeri location No.12/37 (Ch:km:12/790.30) to Bangalore City location No.356/14 (Ch:km:356/420.50) height gauges have been erected at all the level crossings with clear height of 4.67 m above road level with a view to prevent Loads of excessive height from coming into contact or dangerous proximity to live traction wires.

Public are hereby notified to observe the height specified above for the purpose of loading vehicles and to see that the loads carried in road vehicles do not infringe the height gauges under any circumstances.

The dangers of a Load of Excessive Height are as follows:

i. Danger to the height gauge and consequent obstruction to the road as well as the Railway line.

ii. Danger to the materials or equipment carried or for the Vehicle itself.

iii. Danger of fire and risk of life due to contact with or dangerous proximity to the conductors.

No:E/CN/SBC-KGI/OHE/CRS

Date:15.06.2009

Place: Bangalore Cantonment

Chief Engineer/Head Quarter/Construction,
PD-40 South Western Railways,Bangalore-560 046.

**ಸಹಕಾರ ಇಲಾಖೆ**

**ಸಹಕಾರಿಗಳ ಸಂಯುಕ್ತ ನಿಬಂಧಕರು ಹಾಗೂ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು–560 018**

**ದಾವಾ ಸಂಖ್ಯೆ: ಜೆಆರ್‌ಬಿ:ಎಂಡಿ:118:2008–09**

**ವಾದಿ:**

ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಮೆ: ಶ್ರೀ ಸೀತಾರಾಂ ಮಂದಿರಂ ಸೌಹಾರ್ದ, ಸಹಕಾರಿ ಲಿ., ನಂ.1077, ಪಟ್ಟಾಭಿರಾಮ್ ಶಾಸ್ತ್ರಿ ಲೇನ್, ಅಲಸೂರುಪೇಟೆ, ಬೆಂಗಳೂರು.

**ಪ್ರತಿವಾದಿಗಳು:**

1) ಶ್ರೀಮತಿ ಸುಧಾ, ಕೋಂ ಬಿ.ಆರ್. ಸತ್ಯನಾರಾಯಣ.

2) ಶ್ರೀ ಬಿ.ಆರ್. ಸತ್ಯನಾರಾಯಣ, ಬಿನ್ ಎಲ್. ರಾಮಯ್ಯ.

**1 & 2ನೇ ಪ್ರತಿವಾದಿಗಳ ವಿಳಾಸ.**

ನಂ.20/53, ಹೋಟೆಲ್ ರಿವೋಲಿ ಪಕ್ಕ, ಬಿ.ಟಿ.ಎಸ್. ಡಿಪೋ ಎದುರು, ಕೆ.ಹೆಚ್. ರಸ್ತೆ, ಬೆಂಗಳೂರು–27.

3) ಶ್ರೀಮತಿ ಗಾಯತ್ರಿ, ನಂ.144, ಬಾಲಾಜಿ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು–560 028.

**ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ 1997 ಕಲಂ 44(1) ರನ್ವಯ ಸ್ಥಿರಾಸ್ತಿಯನ್ನು ಆದೇಶ ಕೋರುವ ಜಪ್ತಿ ಮಾಡಿದ ನೋಟೀಸು**

ವಾದಿ ಸೌಹಾರ್ದ ಸಹಕಾರಿ ಇದ್ದು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1997 ಕಲಂ 39ರನ್ವಯ ಪ್ರತಿವಾದಿಗಳ ವಿರುದ್ಧ ದಾವೆ ಸಲ್ಲಿಸಿ, ರೂ.16,80,643–00 ಮತ್ತು ಬಡ್ಡಿ ಶೇ.20 ರ ದರದಲ್ಲಿ ವಸೂಲಿ ಮಾಡಲು ದಾವಾ ಆದೇಶವನ್ನು ಕೋರಿರುತ್ತಾರೆ.

ದಾವೆ ಅರ್ಜಿಯ ಪ್ರಕಾರ ಸಹಕಾರಿಯಿಂದ ರೂ.9,90,000–00 ಮತ್ತು 4,82,150–00 ಸಾಲವನ್ನು 1ನೇ ಪ್ರತಿವಾದಿ ಪಡೆದಿರುತ್ತಾರೆ. 2 ಮತ್ತು 3ನೇ ಪ್ರತಿವಾದಿಗಳು 1ನೇ ಪ್ರತಿವಾದಿಗೆ ಜಾಮೀನುದಾರರಾಗಿರುತ್ತಾರೆ. ಪ್ರತಿವಾದಿಗಳು ಮೇಲೆ ವಿವರಿಸಿದ ಸಾಲವನ್ನು ಬಡ್ಡಿಯೊಂದಿಗೆ ಮರುಪಾವತಿ ಮಾಡಲು ವಿಫಲರಾಗಿದ್ದಾರೆ. ಆದ್ದರಿಂದ ದಾವೆ ಅರ್ಜಿಯಲ್ಲಿ ವಿವರಿಸಿರುವ ಪರಿಹಾರಗಳನ್ನು ನೀಡಬೇಕೆಂದು ಕೋರಿರುತ್ತಾರೆ.

ದಾವಾ ಅರ್ಜಿಯೊಂದಿಗೆ ಅರ್ಜಿದಾರರ ಸಹಕಾರಿಯು ಕಲಂ 44 ರನ್ವಯ ಪ್ರಮಾಣೀಕರಿಸಿದ ಅರ್ಜಿ ಸಲ್ಲಿಸಿ ದಾವಾ ಅರ್ಜಿಯಲ್ಲಿ ವಿವರಿಸಿರುವ ಷೆಡ್ಯೂಲ್ ಆಸ್ತಿಗೆ ದಾವಾದೇಶ ಪೂರ್ವ ಜಪ್ತಿ ಆದೇಶವನ್ನು (attachment before judgement) ನೀಡಬೇಕೆಂದು ಕೋರಿರುತ್ತಾರೆ. ಮೇಲೆ ವಿವರಿಸಿದ ಆದೇಶವನ್ನು ತುರ್ತಾಗಿ ನೀಡದೇ ಇದ್ದಲ್ಲಿ 1ನೇ ಪ್ರತಿವಾದಿಯು ಷೆಡ್ಯೂಲ್ ಆಸ್ತಿಯನ್ನು ಮಾರಾಟ/ ಪರಭಾರೆ ಮಾಡುವ ಹುನ್ನಾರ ನಡೆಸಿದ್ದಾರೆ. ಆದ್ದರಿಂದ ತುರ್ತಾಗಿ ಜಪ್ತಿ ಪೂರ್ವ ಆದೇಶ ನೀಡಬೇಕೆಂದು ಕೋರಿರುತ್ತಾರೆ.

ದಾವಾ ಅರ್ಜಿಯೊಂದಿಗೆ ಪ್ರತ್ಯೇಕ ಅರ್ಜಿ ಸಲ್ಲಿಸಿ ವಕೀಲರ ನೆರವು ಪಡೆಯಲು ಅನುಮತಿ ಕೋರಿದ್ದು, ಅನುಮತಿ ನೀಡಿ ಇದರನ್ವಯ ವಕೀಲರು ವಕಾಲತ್ತು ಸಲ್ಲಿಸಿ ಪ್ರಕರಣದಲ್ಲಿ ಹಾಜರಾಗಿ ಮೇಲೆ ವಿವರಿಸಿದ ಕಲಂ 44ರ ಅರ್ಜಿಗೆ ಪೂರಕವಾಗಿ ವಾದ ಮಂಡಿಸಿದ್ದಾರೆ.

ಈ ನ್ಯಾಯಾಲಯವು ವಾದಿ ಸಹಕಾರಿ ಸಲ್ಲಿಸಿರುವ ದಾವಾ ಅರ್ಜಿ ದಾಖಲಾತಿಗಳ ಹಾಗೂ ಕಲಂ 44ರನ್ವಯ ಸಲ್ಲಿಸಿರುವ ಅರ್ಜಿ ಇವುಗಳನ್ನು ಕೂಲಂಕುಷವಾಗಿ ಪರಿಶೀಲಿಸಿದೆ. 1ನೇ ಪ್ರತಿವಾದಿ ವಾದಿ ಸಂಘದಿಂದ ಪಡೆದ ಸಾಲವನ್ನು ಬಡ್ಡಿಯೊಂದಿಗೆ ಮರುಪಾವತಿ ಮಾಡದೆ ಇರುವುದು ಮೇಲ್ನೋಟಕ್ಕೆ ಕಂಡುಬಂದಿದೆ. ಷೆಡ್ಯೂಲ್‌ನಲ್ಲಿ ಆಸ್ತಿಯನ್ನು ಕಲಂ 44(1)ರನ್ವಯ ಜಪ್ತಿ ಪೂರ್ವ ಆದೇಶ ಹೊರಡಿಸದೆ ಇದ್ದಲ್ಲಿ 1ನೇ ಪ್ರತಿವಾದಿಯ ಆಸ್ತಿಯನ್ನು ಮಾರಾಟ ಮಾಡಬಹುದಾಗಿದೆಯೆಂದು ಈ ನ್ಯಾಯಾಲಯಕ್ಕೆ ಮೇಲ್ನೋಟಕ್ಕೆ ಮನವರಿಕೆಯಾಗಿದೆ. ಆದ್ದರಿಂದ ಈ ಕೆಳಗಿನ ಆದೇಶ.

**ಆದೇಶ**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸೌಹಾರ್ದ ಸಹಕಾರಿ ಕಾಯಿದೆ 1997, ಕಲಂ 44(1) ರನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/34/ಸಿಎಲ್‌ಎಂ/2001, ದಿನಾಂಕ:28.02.2003 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಸಿ.ಎಸ್. ವೀರೇಶ್, ಸಹಕಾರಿಗಳ ಸಂಯುಕ್ತ ನಿಬಂಧಕರು, ಹಾಗೂ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಷೆಡ್ಯೂಲ್ ಸ್ವತ್ತನ್ನು ತಾತ್ಕಾಲಿಕ ಆದೇಶಕ್ಕಿಂತ ಪೂರ್ವದಲ್ಲಿ ಜಪ್ತಿ ಮಾಡಿದೆ. ಈ ಆಸ್ತಿಯ ಮೇಲೆ ರೂ.16,80,643–00 ಭೋಜ ದಾಖಲಿಸಲಾಗಿದೆ. ಕಾರಣ ಈ ಆದೇಶದ 30 ದಿನಗಳೊಳಗಾಗಿ ಸದರಿ ಮೊತ್ತವನ್ನು ಶೇ.20 ಬಡ್ಡಿಯೊಂದಿಗೆ ಈ ಪ್ರಾಧಿಕಾರವು ಬಿ.ಡಿ. ಅಂಡ್ ಬಿ.ಆರ್.ಡಿ.ಸಿ.ಸಿ. ಬ್ಯಾಂಕ್ ನಿ., ಬೆಂಗಳೂರು ಇದರಲ್ಲಿ ಹೊಂದಿರುವ ಬ್ಯಾಂಕಿನ ಖಾತೆಗೆ ಪಾವತಿಸಲು ಆದೇಶಿಸಿದೆ. ತಪ್ಪಿದಲ್ಲಿ ಈ ಆದೇಶವನ್ನು ದೃಢೀಕರಿಸಲು ಪರಿಶೀಲಿಸಲಾಗಿರುತ್ತದೆ.

**ಷೆಡ್ಯೂಲ್ ವಿವರ**

ಆಸ್ತಿ ನಿವೇಶನ ಸಂಖ್ಯೆ 6, ಖಾತಾ ಸಂಖ್ಯೆ:17/2, ಸೊನ್ನೇನಹಳ್ಳಿ ವಿಲೇಜ್, ಕೆಂಗೇರಿ ಹೋಬಳಿ, ಬೆಂಗಳೂರು ದಕ್ಷಿಣ ತಾಲ್ಲೂಕು, ಅಳತೆ ಪೂರ್ವದಿಂದ ಪಶ್ಚಿಮಕ್ಕೆ 40 ಅಡಿ ಮತ್ತು ಉತ್ತರದಿಂದ ದಕ್ಷಿಣಕ್ಕೆ 30 ಅಡಿ ಇದಕ್ಕೆ ಸೇರಿದಂತೆ ಚೆಕ್ಕುಬಂದಿ:

ಪೂರ್ವಕ್ಕೆ: ರಸ್ತೆ

ಪಶ್ಚಿಮಕ್ಕೆ: ನಿವೇಶನ ಸಂಖ್ಯೆ:3

ಉತ್ತರಕ್ಕೆ : ನಿವೇಶನ ಸಂಖ್ಯೆ: 5

ದಕ್ಷಿಣಕ್ಕೆ: ನಿವೇಶನ ಸಂಖ್ಯೆ: 7

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಈ ದಿನ ಅಂದರೆ ದಿನಾಂಕ:21.01.2009 ರಂದು ಹೊರಡಿಸಿರುತ್ತೇನೆ.

**ಸಿ.ಎಸ್. ವೀರೇಶ್**

ಪಿ.ಡಿ.41

ಸಹಕಾರಿಗಳ ಸಂಯುಕ್ತ ನಿಬಂಧಕರು ಹಾಗೂ ಸಹಕಾರ ಸಂಘಗಳ
ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ನಂ.5 ಲೋ.ಬಂ ಮತ್ತು ಒ.ಜ.ಸಾ.ಉಪ ವಿಭಾಗ ಸಾಗರ**

**"ಸುತ್ತೋಲೆ"**

**ನಂ.ಸಕಾಇಂ:ಲೋಇ:ಸಿಬ್ಬಂದಿ–1:ಮಾಹಿತಿ ಹಕ್ಕು ಕೈಪಿಡಿ:2005/2009–10/169, ದಿನಾಂಕ:29ನೇ ಜೂನ್, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ :ಲೋಇ:64:ಸ್ವೀಮರ:05 ದಿನಾಂಕ:23–09–2005 ಹಾಗೂ ಲೋಇ.16–ಐಟಿಸಿ:08: 2750 ದಿನಾಂಕ:25–02–08 ಮತ್ತು ಮುಖ್ಯ ಇಂಜಿನಿಯರು (ಸಂಕದ) ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ : ಸಿಬಿಎಸ್: ಮಾಹಿತಿ ಹಕ್ಕು ಕೈಪಿಡಿ :05:ಇಎಸ್‌ಎಫ್:05–06 ದಿ. 19–09–2005 ಹಾಗೂ ಮುಖ್ಯ ಇಂಜಿನಿಯರ್ ಸಂಕದ ಬೆಂಗಳೂರು ಸಿಬಿಎಸ್:ಮಹಾಕ:208:07–08 ದಿ:20–03–08 ರ ಪರಿಷ್ಕೃತ ನಿರ್ದೇಶನದಂತೆ 2005 ರ ಮಾಹಿತಿ ಹಕ್ಕು ಅಧಿನಿಯಮ–2ರ ಅಡಿಯಲ್ಲಿ ಲೋ.ಇ. ಮುಖ್ಯಸ್ಥರನ್ನು ಸಾರ್ವಜನಿಕ ಪ್ರಾಧಿಕಾರಿ ಎಂದು ನಾಮಾಂಕಿತ ಮಾಡಿ ಸರ್ಕಾರವು ನೇಮಿಸಿದೆ.

ಮಾಹಿತಿ ಹಕ್ಕು ಅಧಿನಿಯಮ 2005 ರ ಸೆಕ್ಷನ್ 5(2) ಅಡಿಯಲ್ಲಿ ಇಲಾಖಾ ಮುಖ್ಯಸ್ಥರ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕ್ಷೇತ್ರ ಕಛೇರಿಗಳಲ್ಲಿನ ಕಾರ್ಯ ವಿಧಾನದ ಬಗ್ಗೆ ಸಾರ್ವಜನಿಕರಿಗೆ ಮಾಹಿತಿ ನೀಡಲು ಇಲಾಖಾ ಮುಖ್ಯಸ್ಥರು ಎಲ್ಲಾ ಸಹಾಯಕ ಕಾರ್ಯಪಾಲಕ ಇಂಜಿನಿಯರುಗಳನ್ನು "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಎಂದು ಮತ್ತು ಸದರಿ ನಿಯಮ 5(1)ರ ಅಡಿಯಲ್ಲಿ ಕಾರ್ಯಪಾಲಕ ಇಂಜಿನಿಯರುಗಳನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ" ಎಂದು ನೇಮಕ ಮಾಡಿರುತ್ತಾರೆ

ಈ ಸಂಬಂಧ ಲೋಕೋಪಯೋಗಿ ಇಲಾಖೆ, ಸಾಗರ ಉಪವಿಭಾಗ ವ್ಯಾಪ್ತಿಗೆ ಸಂಬಂಧಿಸಿದಂತೆ, ಉಪವಿಭಾಗ ಕಛೇರಿಯ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರನ್ನು "ವಿಶೇಷ ಸಾರ್ವಜನಿಕ ಮಾಹಿತಿ ಅಧಿಕಾರಿ" (ಎಸ್.ಪಿ.ಐ.ಓ) ಎಂದು ಕಛೇರಿಯ ಸಹಾಯಕ ಇಂಜಿನಿಯರ್ ಇವರನ್ನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಎ.ಪಿ.ಐ.ಓ) ಎಂದು ಈ ಮೂಲಕ ನಾಮಾಂಕಿತ ಮಾಡಲಾಗಿದೆ. ಈ ಬಗ್ಗೆ ಈ ಕಛೇರಿಯಿಂದ "ಮಾಹಿತಿ ಹಕ್ಕು ಕೈಪಿಡಿ–2005" ನ್ನು ಪ್ರಕಟಿಸಲಾಗಿದ್ದು, ವೆಬ್ ಸೈಟ್‌ನಲ್ಲಿ ಪ್ರಚುರಪಡಿಸುವಂತೆ ಡಿಪಿಸಿ/ಎನ್‌ಪಿಸಿ ಇವರಿಗೆ ಸೂಚಿಸಲಾಗಿದೆ. ಸಾಗರ ಲೋ.ಇ ಉಪ ವಿಭಾಗ ಕಛೇರಿಯಿಂದ ಮಾಹಿತಿಯನ್ನು ಈ ಮೂಲಕ ಪುರಸ್ಕರಿಸಿ ಪ್ರಕಟಿಸಿದೆ.

**ಸಿ.ಟಿ. ಅಂಜನಪ್ಪ**

ಸಹಾಯಕ ಕಾರ್ಯಪಾಲಕ ಇಂಜಿನಿಯರ್

ಲೋ.ಬಂ ಮತ್ತು ಒ.ಜ.ಸಾ. ಇಲಾಖೆ, ನಂ.5 ಉಪ ವಿಭಾಗ, ಸಾಗರ.

**ನಮೂನೆ**

**ಮಾಹಿತಿ ಹಕ್ಕು ಅಧಿನಿಯಮ– 2005**

**ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಲೋ.ಬಂ ಮತ್ತು ಒ.ಜ.ಸ ಇಲಾಖೆ ನಂ.5 ಉಪ ವಿಭಾಗ ಸಾಗರ.**

ಮಾಹಿತಿ ಹಕ್ಕು ಅಧಿನಿಯಮ– 2005 ಸೆಕ್ಷನ್ 5(1)(2) ರ ಅಡಿಯಲ್ಲಿ ಈ ಕಛೇರಿಯಿಂದ ನೇಮಿಸಲಾದ ಅಧಿಕಾರಿಗಳು ಸಾರ್ವಜನಿಕ ಸಂಪರ್ಕ ಅಧಿಕಾರಿಗಳಾಗಿರುತ್ತಾರೆ.

ಈ ಕಛೇರಿಯಲ್ಲಿ ಮಾಹಿತಿ ದಾಖಲೆಗಳನ್ನು ನೀಡುವ ಅಧಿಕಾರಿಗಳು : ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1)ರ ಪ್ರಕಾರ.

| **ಅಧಿಕಾರಿ ಹೆಸರು:** | **ಪದನಾಮ:** |
| --- | --- |
| ಶ್ರೀ ಸಿ.ಟಿ ಅಂಜನಪ್ಪ | ಸಹಾಯಕ ಕಾರ್ಯಪಾಲಕ ಇಂಜಿನಿಯರ್<br>ಲೋ.ಬಂ ಮತ್ತು ಒ.ಜ.ಸಾ. ಇಲಾಖೆ<br>ನಂ.5 ಉಪ ವಿಭಾಗ, ಸಾಗರ, ದೂರವಾಣಿ : 08183–226213 |

**ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(2)ರ ಪ್ರಕಾರ**

| **ಅಧಿಕಾರಿ ಹೆಸರು:** | **ಪದನಾಮ:** |
| --- | --- |
| ಶ್ರೀ ಕೆ.ಎನ್. ದಿನೇಶ್ | ಸಹಾಯಕ ಇಂಜಿನೀಯರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಕಛೇರಿ, ಲೋ.ಬಂ ಮತ್ತು ಒ.ಜ.ಸಾ. ಇಲಾಖೆ<br>ನಂ.5 ಉಪ ವಿಭಾಗ, ಸಾಗರ, ದೂರವಾಣಿ : 08183–226213 |

ಮೇಲಿನ ಅಧಿಕಾರಿಗಳು ಮಾಹಿತಿಯನ್ನು 30 ದಿನಗಳೊಳಗಾಗಿ ನೀಡದಿದ್ದಲ್ಲಿ ಅಥವಾ ಸಹಕರಿಸದಿದ್ದಲ್ಲಿ ದೂರನ್ನು ಮತ್ತು ಮೇಲ್ಮನವಿಯನ್ನು ಸೆಕ್ಷನ್ 19(1)ರ ಪ್ರಕಾರ ಕೆಳಕಂಡ ಅಧಿಕಾರಿಗಳಿಗೆ ನೀಡಬಹುದು.

ಕಾರ್ಯಪಾಲಕ ಇಂಜಿನಿಯರ್

ಲೋ.ಬಂ ಮತ್ತು ಒ.ಜ.ಸಾ. ಇಲಾಖೆ, ಶಿವಮೊಗ್ಗ ವಿಭಾಗ,

ಶಿವಮೊಗ್ಗ.

**ಕರ್ತವ್ಯದ ಹಾಜರಾತಿ**

ಮಾಹಿತಿ ಪಡೆಯುವ ಹಕ್ಕು ಅಧಿನಿಯಮ – 2005 ಸೆಕ್ಷನ್ 5(1) ಪ್ರಕಾರ ಶ್ರೀ ಸಿ.ಟಿ ಅಂಜನಪ್ಪ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಆದ ನಾನು ವಿಶೇಷ ಸಾರ್ವಜನಿಕ ಮಾಹಿತಿ ಅಧಿಕಾರಿ (ಎಸ್.ಪಿ.ಐ.ಓ)ಯಾಗಿ ಕರ್ತವ್ಯ ನಿರ್ವಹಿಸಲು ದಿನಾಂಕ: 13–08–2008 ರಂದು ಹೊಣೆಗಾರಿಕೆಯನ್ನು ಒಪ್ಪಿಕೊಂಡಿರುತ್ತೇನೆ.

**ಪದನಾಮ:**

ಸಹಾಯಕ ಕಾರ್ಯಪಾಲಕ ಇಂಜಿನಿಯರ್
ಲೋ.ಬಂ ಮತ್ತು ಒ.ಜ.ಸಾ. ಇಲಾಖೆ, ನಂ.5 ಉಪ ವಿಭಾಗ, ಸಾಗರ.

**ಕರ್ತವ್ಯದ ಹಾಜರಾತಿ**

ಮಾಹಿತಿ ಪಡೆಯುವ ಹಕ್ಕು ಅಧಿನಿಯಮ – 2005 ಸೆಕ್ಷನ್ 5(2) ಪ್ರಕಾರ ಶ್ರೀ ಕೆ.ಎನ್ ದಿನೇಶ್ ಸಹಾಯಕ ಇಂಜಿನಿಯರ್, ಆದ ನಾನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಎ.ಪಿ.ಐ.ಒ)ಯಾಗಿ ಕರ್ತವ್ಯ ನಿರ್ವಹಿಸಲು ದಿನಾಂಕ: 30–09–2008 ರಂದು ಹೊಣೆಗಾರಿಕೆಯನ್ನು ಒಪ್ಪಿಕೊಂಡಿರುತ್ತೇನೆ.

**ಪದನಾಮ:**

ಸಹಾಯಕ ಇಂಜಿನಿಯರ್,
ಸಹಾಯಕ ಕಾರ್ಯಪಾಲಕ ಇಂಜಿನಿಯರ್
ಲೋ.ಬಂ ಮತ್ತು ಒ.ಜ.ಸಾ. ಇಲಾಖೆ, ನಂ.5 ಉಪ ವಿಭಾಗ, ಸಾಗರ.

**ಸುವರ್ಣ ಕರ್ನಾಟಕ– 2005**

**ಕರ್ನಾಟಕ ಸರ್ಕಾರ**

**(ಲೋಕೋಪಯೋಗಿ ಇಲಾಖೆ)**

**ಮಾಹಿತಿ ಹಕ್ಕು ಕೈಪಿಡಿ–2005**

**ಸೆಕ್ಷನ್ 4 (1) (ಬಿ) ಅನ್ವಯ**

**ಸಹಾಯಕ ಕಾರ್ಯಪಾಲಕ ಇಂಜಿನಿಯರ್**

**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ನಂ.5 ನೇ ಉಪವಿಭಾಗ, ಸಾಗರ**

**ಶಿವಮೊಗ್ಗ ಜಿಲ್ಲೆ**

**ಸುವರ್ಣ ಕರ್ನಾಟಕ– 2005**

**ಕರ್ನಾಟಕ ಸರ್ಕಾರ**

**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಸಾಗರ ಉಪ ವಿಭಾಗ, ಸಾಗರ**

**ಮಾಹಿತಿ ಹಕ್ಕು ಕೈಪಿಡಿ–2005 ಸೆಕ್ಷನ್ 4(1) (ಬಿ) ಅನ್ವಯ**

1. ಸಂಸ್ಥೆಯ ಬಗ್ಗೆ ವಿವರಗಳು, ಕಾರ್ಯಗಳು ಮತ್ತು ಕರ್ತವ್ಯಗಳು :–

ಅ) ಸಂಸ್ಥೆಯ ಹೆಸರು : ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ನಂ.5 ನೇ ಉಪ ವಿಭಾಗ ಸಾಗರ.

ಆ) ರಚನೆ :

| **ಸಹಾಯಕ ಕಾರ್ಯಪಾಲಕ ಇಂಜಿನಿಯರ್** | |
|---|---|
| ತಾಂತ್ರಿಕ ಶಾಖೆ | ಆಡಳಿತ ಶಾಖೆ |
| ಸಹಾಯಕ ಇಂಜಿನಿಯರ್– 2 | ಪ್ರಥಮ ದರ್ಜೆ ಸಹಾಯಕರು–1 |
| ಕಿರಿಯ ಇಂಜಿನಿಯರ್ – 6 | ದ್ವಿತೀಯ ದರ್ಜೆ ಸಹಾಯಕರು– 2 |
| | ಚಾಲಕರು – 2 |
| | 'ಡಿ' ದರ್ಜೆ ನೌಕರರು –2 |
| | ಟಿ.ಬಿ. ಮೇಟಿ – 3 |
| | ವಾಟರ್ ಬಾಯ್ – 2 |
| | ಸ್ವೀಪರ್ – 3 |

**ಕಾರ್ಯಗಳು ಮತ್ತು ಕರ್ತವ್ಯಗಳು :–**

ಸಾಗರ ತಾಲ್ಲೂಕಿನ ವ್ಯಾಪ್ತಿಯಲ್ಲಿ ವಿವಿಧ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಬರುವ ಎಲ್ಲಾ ಕಾಮಗಾರಿಗಳ ಪೂರ್ಣ ಕಾರ್ಯ ವ್ಯಾಪ್ತಿಯನ್ನು ಹೊಂದಿದ್ದು, ಹಾಗೂ ಸಾರ್ವಜನಿಕ ಆಸ್ತಿ–ಪಾಸ್ತಿಗಳಿಗೆ ಸಂಬಂಧಿಸಿದ ಆಡಳಿತಾತ್ಮಕ, ಆರ್ಥಿಕ ಹಾಗೂ ಸೇವೆಗಳಿಗೆ ಸಂಬಂಧಿಸಿದ ಕೆಲಸ ಕಾರ್ಯಗಳನ್ನು ನಿರ್ವಹಿಸಲಾಗುತ್ತಿದೆ.

**II. ಅಧಿಕಾರಿ ಮತ್ತು ಸಿಬ್ಬಂದಿಗಳ ಅಧಿಕಾರಗಳು ಮತ್ತು ಕರ್ತವ್ಯಗಳು :**

**1. ಸಹಾಯಕ ಕಾರ್ಯಪಾಲಕ ಇಂಜಿನಿಯರರು :**

ಲೋಕೋಪಯೋಗಿ ಇಲಾಖೆ, ನಂ.5ನೇ ಉಪವಿಭಾಗ, ಸಾಗರ ಕಛೇರಿಯ ಅಧಿಕೃತ ಮುಖ್ಯಸ್ಥರಾಗಿದ್ದು, ಇಲಾಖಾ ಮುಖ್ಯಸ್ಥರ ಮೇಲಾಧಿಕಾರಿಗಳ ನಿರ್ದೇಶನಗಳನ್ನು ನಿಯಮದ ಚೌಕಟ್ಟಿನಲ್ಲಿ ಜಾರಿಗೊಳಿಸುವ ಅಧಿಕಾರ ಮತ್ತು ಜವಾಬ್ದಾರಿಗಳನ್ನು ಹೊಂದಿರುತ್ತಾರೆ, ಹಾಗೂ ಕಛೇರಿಯ ಸಿಬ್ಬಂದಿ ಮತ್ತು ಕಾಮಗಾರಿಗಳ ಮೇಲ್ವಿಚಾರಣೆ ಹಾಗೂ ನಿಯಂತ್ರಣದ ಅಧಿಕಾರವನ್ನು ಹೊಂದಿರುತ್ತಾರೆ.

**ತಾಂತ್ರಿಕ ಶಾಖೆ :–**

**2. ಸಹಾಯಕ ಇಂಜಿನಿಯರುಗಳು – 2 :**

ಉಪವಿಭಾಗ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಬಗೆಯ ಕಾಮಗಾರಿಗಳ ನಕ್ಷೆ ಮತ್ತು ಅಂದಾಜು ಪಟ್ಟಿಗಳನ್ನು ತಯಾರಿಸುವುದು ಹಾಗೂ ಕಾಮಗಾರಿಗಳ ಪೂರ್ಣ ಉಸ್ತುವಾರಿ, ನಿರ್ವಹಣೆ ಮಾಡುವುದು, ಹಾಗೂ ಕಾಮಗಾರಿಗಳ ಬಿಲ್ಲನ್ನು ತಯಾರಿಸುವುದು ಮತ್ತು ಸಂಬಂಧಪಟ್ಟಂತೆ ಶಾಖೆಯ ಪೂರ್ಣ **ಉಸ್ತುವಾರಿ ಮತ್ತು ಪತ್ರ ವ್ಯವಹಾರ.**

**3. ಕಿರಿಯ ಇಂಜಿನಿಯರುಗಳು –6 :**

ಉಪವಿಭಾಗ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಬಗೆಯ ಕಾಮಗಾರಿಗಳ ನಕ್ಷೆ ಮತ್ತು ಅಂದಾಜು ಪಟ್ಟಿಗಳನ್ನು ತಯಾರಿಸುವುದು ಹಾಗೂ ಕಾಮಗಾರಿಗಳ ಪೂರ್ಣ ಉಸ್ತುವಾರಿ : ನಿರ್ವಹಣೆ ಮಾಡುವುದು, ಹಾಗೂ ಕಾಮಗಾರಿಗಳ ಬಿಲ್ಲನ್ನು ತಯಾರಿಸುವುದು ಮತ್ತು ಸಂಬಂಧಪಟ್ಟಂತೆ ಶಾಖೆಯ ಪೂರ್ಣ ಪತ್ರ ವ್ಯವಹಾರ ಹಾಗೂ ಮಾಸಿಕ ಎಂ.ಎಂ.ಆರ್. ಮೀಟಿಂಗ್‌ಗೆ ವರದಿ ಸಲ್ಲಿಸುವುದು, ಉಪವಿಭಾಗ ವ್ಯಾಪ್ತಿಯ ಎಲ್ಲಾ ರಸ್ತೆ, ಸೇತುವೆ, ಕಟ್ಟಡಗಳ ಅಂಕಿ ಅಂಶ ನಿರ್ವಹಣೆ ಮಾಡುವುದು, ವಾರ್ಷಿಕ ಆಡಳಿತಾತ್ಮಕ ಪ್ರಗತಿ ವರದಿ ತಯಾರಿಸಿ ಮೇಲಾಧಿಕಾರಿಗಳಿಗೆ, ಎಲ್‌ಎಕ್ಯೂ : ಎಲ್‌ಸಿಕ್ಯೂ ಪತ್ರ ವ್ಯವಹಾರ ನಡೆಸುವುದು.

**ಆಡಳಿತ ಶಾಖೆ :–**

**1. ಪ್ರಥಮ ದರ್ಜೆ ಸಹಾಯಕರು – 1 :**

ಆಡಳಿತ ಶಾಖೆಯ ವ್ಯವಹಾರ, ಮಾಸಿಕ ನಗದು ಲೆಕ್ಕ ಹೊಂದಾಣಿಕೆ, ಮತ್ತು ನಗದು ಪುಸ್ತಕದ ನಿರ್ವಹಣೆ, ಸಿಬ್ಬಂದಿ ಆಯವ್ಯಯ ಬಜೆಟ್ ಕೆ.ಎ.ಟಿ. ಕಾರ್ಮಿಕ ನ್ಯಾಯಾಲಯ ಮತ್ತು ರಾಜ್ಯದ ನ್ಯಾಯಾಲಯದ ಪ್ರಕರಣಗಳ ಕಡತಗಳನ್ನು ನಿರ್ವಹಿಸುವುದು, ಕಛೇರಿಯ ವ್ಯಾಪ್ತಿಯಲ್ಲಿ ಬರುವ ಅತಿಥಿ ಗೃಹ– ಪ್ರವಾಸಿ ಮಂದಿರಗಳ ಕೊಠಡಿಗಳನ್ನು ಕಾಯ್ದಿರಿಸುವುಕ್ಕೆ ಹಾಗೂ ಪತ್ರ ವ್ಯವಹಾರ ಆಡಳಿತ ಶಾಖೆಯ ಕಡತಗಳನ್ನು ವಿಷಯ ನಿರ್ವಾಹಕರಿಂದ ಸಕಾಲದಲ್ಲಿ ವಿಲೇವಾರಿಯಾಗುವಂತೆ ಸಹಕರಿಸಿ, ಮೇಲ್ವಿಚಾರಣೆ ಮಾಡುವುದು.

**2. ದ್ವಿತೀಯ ದರ್ಜೆ ಸಹಾಯಕರು – 2 :**

ಸಿಬ್ಬಂದಿ ಶಾಖೆಯಲ್ಲಿದ್ದು ಪತ್ರಗಳ ಸ್ವೀಕೃತಿ ಮತ್ತು ವಿಲೇವಾರಿ ಬಗ್ಗೆ ಕೆಲಸ ನಿರ್ವಹಿಸುವುದು, ಮಾಸಿಕ ವರದಿಗಳ ಸಲ್ಲಿಕೆ, ಕಛೇರಿ ಸಿಬ್ಬಂದಿಯವರ ವೇತನ, ಭತ್ಯೆಗಳ ಬಿಲ್ಲು ತಯಾರಿಸುವುದು, ಸಿಬ್ಬಂದಿ ವೆಚ್ಚದ ವರದಿ ಸಲ್ಲಿಕೆ, ಸೇವಾ ಪುಸ್ತಕಗಳ ನಿರ್ವಹಣೆ, ಪ್ರವಾಸಿ ಭತ್ಯೆ ಬಿಲ್ಲು ತಯಾರಿಕೆ, ಸಾದಿಲ್ವಾರು ಬಿಲ್ಲು ತಯಾರಿಕೆ, ಉಗ್ರಾಣದ ಪತ್ರ ವ್ಯವಹಾರಗಳ ನಿರ್ವಹಣೆ, ಉಪವಿಭಾಗ ಕಛೇರಿಯ ಲೇಖನ ಸಾಮಾಗ್ರಿ ಖರೀದಿ ಮುಂತಾದ ಕೆಲಸ ನಿರ್ವಹಿಸುವುದು.

**3. ಚಾಲಕರು–2 :**

ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ವಾಹನ ಚಾಲನೆ ಮತ್ತು ಕಛೇರಿಯ ಇತರೆ ವಾಹನಗಳ ಚಾಲನೆ ಮತ್ತು ನಿರ್ವಹಣೆ ನಡೆಸುವುದು.

**4. 'ಡಿ' ದರ್ಜೆ ನೌಕರರು –2 :**

ಕಛೇರಿಯ ಎಲ್ಲಾಕೊಠಡಿಗಳನ್ನು ಶುಚಿಯಾಗಿಡುವುದು, ಕಡತಗಳ ವಿಲೇವಾರಿ ಬಗ್ಗೆ ಅಧಿಕಾರ : ಸಿಬ್ಬಂದಿಯವರಿಗೆ ಸಹಕರಿಸುವುದು, ಕಡತ, ಟಪಾಲು ಇತ್ಯಾದಿಗಳನ್ನು ಶಾಖೆಯೊಳಗೆ ಮತ್ತು ಹೊರಗೆ ಸಂಬಂಧಿಸಿದವರಿಗೆ ತಲುಪಿಸುವುದು.

**5. ಮೇಟಿ – 3 :**

ಉಪ ವಿಭಾಗ ವ್ಯಾಪ್ತಿಯಲ್ಲಿ ಇರುವ ಅತಿಥಿ ಗೃಹ– ಪ್ರವಾಸಿ ಮಂದಿರಗಳಲ್ಲಿ ಕಾಯ್ದಿರಿಸಿದ ಕೊಠಡಿಗಳನ್ನು ಅಧಿಕಾರಿ ವರ್ಗ ಸಾರ್ವಜನಿಕರಿಗೆ ನಿಗದಿತ ಬಾಡಿಗೆ ಪಡೆದು ಕ್ರಮವಾಗಿ ವಿತರಿಸುವುದು, ಹಾಗೂ ಸರ್ಕಾರಿ ನಿಯಮಗಳನ್ನು ಪಾಲಿಸುವುದು. ಉಸ್ತುವಾರಿ ನಿರ್ವಹಣೆ.

